

# ಹಣತೆ

ಶಿವರಾಮ ಕಾರಂತ ವೇದಿಕೆಯ ಮುಖಪತ್ರಿಕೆ

ಸಂಪುಟ - 8 ಅಕ್ಟೋಬರ್-ದಶಂಬರ್ 2004 ಸಂಚಿಕೆ - 3



ಸಾಹಿತ್ಯ ಸಂಸ್ಕೃತಿ ಮತ್ತು ಕನ್ನಡ ಭಾಷೆಗಳ ಸಂವರ್ಧನೆಗೆಂದು ಮೀಸಲಾದ
ಶಿವರಾಮ ಕಾರಂತ ವೇದಿಕೆಯ ತ್ರೈಮಾಸಿಕ ಪತ್ರಿಕೆ

**ಶಿವರಾಮ ಕಾರಂತ ವೇದಿಕೆ**

ನಂ. 307, 17ನೇ ಅಡ್ಡರಸ್ತೆ, 2ನೇ ವಿಭಾಗ
ರವೀಂದ್ರನಾಥ ಟಾಗೋರ್‌ನಗರ, ಬೆಂಗಳೂರು-560 032



# ಶಿವರಾಮ ಕಾರಂತ ವೇದಿಕೆ (ರಿ.)

'ಆದರ್ಶ', ನಂ. 307, 17ನೇ ಅಡ್ಡರಸ್ತೆ, 2ನೇ ವಿಭಾಗ
ರವೀಂದ್ರನಾಥ ಟಾಗೋರ್‌ನಗರ, ಬೆಂಗಳೂರು-560 032
ದೂರವಾಣಿ: 23336822 / 23336087
ಇ-ಮೇಲ್: pcchadaga@hotmail.com

## ಕಾರ್ಯಕಾರಿ ಮಂಡಳಿ



## ಕಾರ್ಯಕಾರಿ ಸಮಿತಿಯ ಸದಸ್ಯರು

ಖಾಸಗಿ ಪ್ರಸಾರಕ್ಕೆ ಮಾತ್ರ



# ಹಣತೆ

## ಶಿವರಾಮ ಕಾರಂತ ವೇದಿಕೆಯ ಮುಖಪತ್ರಿಕೆ

ಸಂಪುಟ - 8 ಅಕ್ಟೋಬರ್-ದಶಂಬರ್ 2004 ಸಂಚಿಕೆ - 3

**ಈ ಸಂಚಿಕೆಯಲ್ಲಿ . . .**



## ಹಣತೆಯ ಹಂಬಲ

(ರವೀಂದ್ರನಾಥ ಠಾಗೋರ್ ಮೂಲ ಬಂಗಾಲಿ ಪದ್ಯ)

**ಕೀಲೋಯಿಬೆ ನೋರೆ ಕಾರ್ಜೊ ಕೂಹೆಶೊಂಧಾ ರಬಿ**
**ಶುನಿಯಾ ಜಗತ್ ನಿರುತ್ತರ್ ಛಭಿ**
**ಮಾಟೀರ್ ಪ್ರದೀಪ್ ಅಶಿಲೋ ಶಾಮೀ**
**ಅಮಾರ ಜೆಟುಕು ಶಾದ್ಧೊ ತಾ ಕೊರಿ ಅಮಿ**

ಅರ್ಥ: ಮುಳುಗುತ್ತಿರುವ ಸೂರ್ಯ ಕೇಳಿದ 'ನನ್ನ ಕೆಲಸ (ಜಗತ್ತಿಗೆ ಬೆಳಕು ನೀಡುವ ಕೆಲಸ)ವನ್ನು ಯಾರು ಕೈಗೊಳ್ಳುತ್ತೀರಿ' ಎಂದು. ಒಂದು ಕ್ಷಣ ಇಡೀ ಜಗತ್ತು ನಿರುತ್ತರವಾಯಿತು. ಅನಂತರ ಒಂದು ಸಣ್ಣ ಮಣ್ಣಿನ ಹಣತೆ ಎದ್ದು ನಿಂತು ಹೇಳಿತು ಹೀಗೆ: 'ಸ್ವಾಮೀ, ನನ್ನಿಂದ ಎಷ್ಟು ಸಾಧ್ಯವೋ ಅಷ್ಟನ್ನು ನಾನು ಮಾಡುತ್ತೇನೆ.'

ಸಂಪಾದಕೀಯ

# ಕಾರಂತ – ಅಳಿಯಲಾರದ ನೆನಪು

ಅಕ್ಟೋಬರ್ ಹತ್ತು ಶಿವರಾಮ ಕಾರಂತರ ಜನ್ಮದಿನ. ಸಹಜವಾಗಿಯೇ ಅವರ ನೆನಪು, ಅವರ ಅನನ್ಯ ವ್ಯಕ್ತಿತ್ವದ ನೆನಪು, ಅವರ ಅಪಾರ, ಅಗಾಧ ಸಾಧನೆಗಳ ನೆನಪು ಮರುಕಳಿಸುವ ದಿನ. ಕಾರಂತರು ಕೇವಲ ಸಾಹಿತಿಯಷ್ಟೇ ಅಲ್ಲ. ಅವರು ಸಾಮಾಜಿಕ, ಸಾಂಸ್ಕೃತಿಕ, ದಾರ್ಶನಿಕ ಚಿಂತಕರಷ್ಟೇ ಅಲ್ಲ. ಸಕ್ರಿಯವಾಗಿ ತಾನು ನಂಬಿದ ತತ್ತ್ವಗಳಿಗಾಗಿ ಹೋರಾಡಿದವರು. ತಾನು ಹೇಳಿದ್ದನ್ನು ಕೃತಿಯಲ್ಲಿ ಆಚರಿಸಿ ತೋರಿಸಿದವರು. ಅವರು ಅನೇಕ ವಿಷಯಗಳಲ್ಲಿ 'ಆಡದೇ ಮಾಡಿದ ರೂಢಿಯೊಳಗುತ್ತಮರು.' ಉದಾಹರಣೆಗೆ ಅವರು 'ದಾನ ಮಾಡಬೇಕು, ಕಲಾವಿದರಿಗೆ ಸಹಾಯ ಮಾಡಬೇಕು' ಎಂದು ಉಪದೇಶ ಕೊಡಲಿಲ್ಲ. ಆದರೆ ಪ್ರತಿತಿಂಗಳೂ ಹತ್ತಾರು ಬಡಕಲಾವಿದರಿಗೆ, ನಿರ್ಗತಿಕರಿಗೆ ಮನಿಯಾರ್ಡರ್ ಮಾಡುತ್ತಿದ್ದರು. ಅದನ್ನು ಸಾಯುವವರೆಗೂ ವ್ರತದಂತೆ ಅಚಲ ನಿಷ್ಠೆಯಿಂದ ಪಾಲಿಸಿಕೊಂಡು ಬಂದಿದ್ದರು. 'ಕನ್ನಡಕ್ಕಾಗಿ ಹೋರಾಡು' ಎಂದು ಅವರು ಪಾಠ ಹೇಳುತ್ತಿರಲಿಲ್ಲ. ಆದರೆ ಕನ್ನಡದಲ್ಲಿ ಕಲೆಯ ಬಗ್ಗೆ, ವಿಜ್ಞಾನದ ಬಗ್ಗೆ ಬರೆದರು. ಪಠ್ಯಪುಸ್ತಕಗಳನ್ನೂ, ನಿಘಂಟು, ವಿಶ್ವಕೋಶಗಳಂಥ ಕೃತಿಗಳನ್ನೂ ರಚಿಸಿ ತನ್ಮೂಲಕ ಕನ್ನಡ ಭಾಷೆಯ ಶಕ್ತಿಸಾಮರ್ಥ್ಯವನ್ನೂ ಹೆಚ್ಚಿಸಿದರು. ಇದು ಕನ್ನಡವನ್ನು ಬೆಳೆಸುವ ಮಹತ್ವದ ಕೆಲಸವೆನ್ನುವ ಸತ್ಯವನ್ನು ಸದಾ ನೆನಪಿನಲ್ಲಿರಿಸಿಕೊಳ್ಳಬೇಕಾದ ಸಂಗತಿ. ಇನ್ನು, ಅವರ ಸಾಹಿತ್ಯದ ಕುರಿತು ಎಲ್ಲರಿಗೂ ತಿಳಿದಿದೆ. ಅದರ ವೈಶಾಲ್ಯ, ವೈವಿಧ್ಯ, ವೈಶಿಷ್ಟ್ಯ, ಸತ್ವ, ಮಹತ್ವಗಳ ಕುರಿತು ಹೇಳಿದಷ್ಟು ಮತ್ತೂ ಉಳಿಯುತ್ತದೆ. ಒಬ್ಬ ಶ್ರೇಷ್ಠ, ಮೌಲಿಕ, ಚಿಂತಕರಾಗಿಯೂ, ವೈಚಾರಿಕರಾಗಿಯೂ ಅವರು ನೀಡಿದ ಕೊಡುಗೆ ಅಮೂಲ್ಯವಾದುದು. ಹೀಗೆ ಸಾಹಿತ್ಯ ಪುರುಷರಿಗಾಗಿ, ಸಾಂಸ್ಕೃತಿಕ ಗೊಮ್ಮಟನಾಗಿ ಅವರು ಜನಮನದಲ್ಲಿ ಧ್ರುವತಾರೆಯಾಗಿ ಉಳಿಯುತ್ತಾರೆ. 'ಸಮಾಜದ ಋಣವನ್ನು ತೀರಿಸಬೇಕು' ಎಂಬ ಅವರ ಜೀವನಸೂತ್ರ ಎಲ್ಲ ಕಾಲಕ್ಕೂ, ಎಲ್ಲ ದೇಶಕ್ಕೂ ಸಲ್ಲುವ ಮಹಾಸಂದೇಶ. ಆ ಮಾತನ್ನು ನಮ್ಮ ಎಲ್ಲ ಮಕ್ಕಳಿಗೂ ಬಾಯಿಪಾಠ ಮಾಡಿಸಬೇಕು.

ಕಾರಂತ ಶತಮಾನೋತ್ಸವದ ಸಂದರ್ಭದಲ್ಲಿ ಸರಕಾರ ಅಷ್ಟಿಷ್ಟು ಕಾರ್ಯಕ್ರಮಗಳನ್ನು ಏರ್ಪಡಿಸಿದ್ದರೂ ಅದು ಮಾಮೂಲಿ ಸರಕಾರಿ ಕಾರ್ಯಕ್ರಮಗಳ ಇತಿಮಿತಿಗಳನ್ನು ಮೀರಿ ಯಶಸ್ವಿಯಾದದ್ದು ಕಡಿಮೆ. ಆದರೆ ಜನರೇ ಸ್ವಯಂ ಸ್ಫೂರ್ತಿಯಿಂದ ವಿವಿಧ ಸಂಘಟನೆಗಳ ಮುಖಾಂತರ ನಡೆಸಿದ ಕಾರ್ಯಕ್ರಮಗಳು ಕಾರಂತರ ಪ್ರಭಾವ ಶತಮಾನ

ಕಳೆದರೂ ಕುಂದಿಲ್ಲ ಎನ್ನುವುದಕ್ಕೆ ಸಾಕ್ಷಿಯಾಗಿವೆ. ಕಾರಂತರ ಕೊಡುಗೆಗಳ ಬಗ್ಗೆ ಟಿ.ವಿ.ಯಲ್ಲಿ ಪ್ರತಿವಾರ ಕಾರ್ಯಕ್ರಮ ಬರುತ್ತಿದೆ. ಕಾರಂತರ 'ಗರ್ಭಗುಡಿ', 'ಮೂಕಜ್ಜಿಯ ಕನಸುಗಳು' ಮುಂತಾದ ಕೃತಿಗಳ ರಂಗಪ್ರಯೋಗಗಳು ಯಶಸ್ವಿಯಾಗಿ ನಡೆಯುತ್ತಿವೆ. 'ಸರಸಮ್ಮನ ಸಮಾಧಿ' ದೂರದರ್ಶನದಲ್ಲಿ ಧಾರಾವಾಹಿಯಾಗಿ ಪ್ರದರ್ಶಿತವಾಗುತ್ತಿದೆ. ಇವೆಲ್ಲ ನಾಡಿನ ಸಾಂಸ್ಕೃತಿಕ ಆರೋಗ್ಯಕ್ಕೆ ಅಗತ್ಯವಾದ, ಪೂರಕವಾದಂಥ ಬೆಳವಣಿಗೆಗಳು. ಕಾರಂತರ ಕೃತಿಗಳ ಸತ್ವ, ವೈವಿಧ್ಯ ಎಷ್ಟಿದೆಯೆಂದರೆ ಇಂಥ ಇನ್ನೂ ಅನೇಕ ಕಾರ್ಯಗಳನ್ನು ಯಶಸ್ವಿಯಾಗಿ ಹಮ್ಮಿಕೊಳ್ಳಬಹುದು. ಯುವಜನಾಂಗಕ್ಕೆ ಕಾರಂತರನ್ನು, ತನ್ಮೂಲಕ ಕನ್ನಡದ ಸತ್ವವನ್ನು ಪರಿಚಯಿಸುವ ಮಹತ್ವದ ಸಾಧನೆ ಇದರಿಂದಾದೀತು. ಅಂಥ ಪ್ರಯತ್ನಗಳು ನಡೆಯುವಂತಾಗಲಿ.

**ಸಂಪಾದಕೀಯ ಸ್ವಗತ**

ಕನ್ನಡದಲ್ಲಿ ಸಣ್ಣಪತ್ರಿಕೆಗಳನ್ನು ನಡೆಸುವುದು ಎಂಥ ದುಸ್ಸಾಹಸದ ಕೆಲಸ ಎನ್ನುವುದನ್ನು ಸಾಹಿತ್ಯಪ್ರಿಯರೆಲ್ಲ ಬಲ್ಲರು. ಅನೇಕ ಸಾಹಿತ್ಯ ಪತ್ರಿಕೆಗಳು ಹುಟ್ಟಿ, ಕೆಲಕಾಲ ಬೆಳಗಿ, ಕಣ್ಮರೆಯಾಗಿವೆ. ನಮ್ಮೀ ಪುಟ್ಟ 'ಹಣತೆ' ತನ್ನ ಸಣ್ಣದೀಪದ ಬೆಳಕನ್ನು ಬೀರುತ್ತ ಇಷ್ಟು ಕಾಲ ಉಳಿದು ಬಂದಿದೆ. ಇದಕ್ಕೆ ಎಣ್ಣೆ ಹೊಯ್ಯುವ ಕಾಯಕವನ್ನು ಶ್ರೀ ಚಂದ್ರಶೇಖರ ಚಡಗರು 'ನಂದಾದೀಪ'ದ ವ್ರತನಿಷ್ಠೆಯಿಂದ ಮಾಡಿಕೊಂಡು ಬಂದಿದ್ದಾರೆ. ಅವರ ಉತ್ಸಾಹ ಕುಂದಿಲ್ಲ. ಹಣತೆಯ ಬೆಳಕನ್ನು ಇನ್ನಷ್ಟು ಉಜ್ವಲವಾಗಿಸ ಬೇಕೆಂಬ ಹಂಬಲ ಅವರದು. ಅದಕ್ಕಾಗಿ ಸಂಪಾದಕತ್ವದ ಹೊಣೆಯನ್ನು ನನಗೆ ವಹಿಸಿದ್ದಾರೆ. ನಮ್ಮಲ್ಲಿ ಮಹತ್ವಾಕಾಂಕ್ಷೆ ಇಲ್ಲವಾದರೂ, ಬೆಂಗಳೂರಿನಲ್ಲಿ ಕನ್ನಡ ಉಳಿಯುವುದಕ್ಕೆ, ಬೆಳೆಯುವುದಕ್ಕೆ ಪ್ರೋತ್ಸಾಹಕ ವಾತಾವರಣ ಇಲ್ಲವಾದರೂ, ಪುಸ್ತಕ ಸಂಸ್ಕೃತಿಗೆ ದೂರದರ್ಶನ ಮುಂತಾದ ಕಾರಣಗಳಿಂದ ಧಕ್ಕೆಯಾಗುತ್ತಿದ್ದರೂ ಚಡಗರ ದೃಢಸಂಕಲ್ಪ ಅಚಲವಾಗಿರುವುದರಿಂದ ಮಹಾಕವಿ ಟಾಗೋರ್ ಹೇಳಿದಂತೆ 'ನಮ್ಮಿಂದ ಸಾಧ್ಯವಾದಷ್ಟು' ಸೇವೆಯನ್ನು ನಾವು ಸಲ್ಲಿಸಲು ನಿರ್ಧರಿಸಿದ್ದೇವೆ. ಅದಕ್ಕೆ ಲೇಖಕರ ಹಾಗೂ ಜಾಹೀರಾತುದಾರರ ಸಹಕಾರ ದೊರೆತೀತೆಂಬ ಆಶಾವಾದದಿಂದ ಮುಂದುವರಿಯಲಿದ್ದೇವೆ. ಇದು ಯಾವುದೇ ಆರ್ಥಿಕ ಅಥವಾ ಇನ್ನಿತರ ಲೌಕಿಕ ಲಾಭವಿಲ್ಲದ ಶುದ್ಧ ಸಾಂಸ್ಕೃತಿಕ ಆದರ್ಶದ ಕಾಯಕ. ಇಂಥ ಪ್ರಯತ್ನಕ್ಕೆ ಪ್ರೋತ್ಸಾಹ ದೊರಕಿದರೆ ನಾವು ಧನ್ಯರು. ಸಮಾಜದ ಋಣ ತೀರಿಸುವ ಈ ಕೆಲಸದಲ್ಲಿ ತಾವೆಲ್ಲರೂ ತಮ್ಮಿಂದಾಗುವ ಸಹಕಾರವನ್ನು ನೀಡಬೇಕೆನ್ನುವುದೇ ನಮ್ಮ ವಿನಮ್ರ ವಿಜ್ಞಾಪನೆ.

**- ಬಿ.ವಿ. ಕೆದಿಲಾಯ**

# ಕಣ್ಣು ಕಾಣದ ಕವಿ ಕಂಡ ರವಿ

- ಡಾ. ಹೆಚ್.ಎಸ್. ವೆಂಕಟೇಶಮೂರ್ತಿ

ಹಿರಿಯಕವಿ ಪುತಿನ ನನಗೆ ತುಂಬ ಪರಿಚಿತರು ಹಾಗೂ ಪ್ರಿಯರು. ಅವರ ಮನೆಗೆ ನಾನು ಆಗಾಗ ಹೋಗಿ ಅವರನ್ನು ಕಂಡು, ಅವರ ಮಾತುಗಳನ್ನು ಕೇಳಿ ಸವಿಯುತ್ತಿದ್ದೆ. ಹಾಗೆಯೇ ಒಂದು ಸಂಜೆ ಅವರ ಮನೆಗೆ ಹೋಗಿದ್ದೆ. ಅವರ ಮನೆಯ ಮುಖ್ಯದ್ವಾರ ಪೂರ್ವಾಭಿಮುಖವಾಗಿದೆ. ಒಳಗೆ ವಿಶಾಲವಾದ ಹಾಲ್. ಎದುರುಗಡೆ ಅಂದರೆ ಪಶ್ಚಿಮ ದಿಕ್ಕಿಗಿದ್ದ ಗೋಡೆಗೆ ಮುಖ ಮಾಡಿ ಅವರು ಖುರ್ಚಿಯಲ್ಲಿ ಕುಳಿತಿದ್ದರು. ನನಗೆ ಈ ದೃಶ್ಯ ನೋಡಿ ಕೊಂಚ ಅಚ್ಚರಿಯಾಯಿತು. ಏಕೆ ಹೀಗೆ ಮನೆಯೊಳಗೆ ಬರುವವರಿಗೆ ಬೆನ್ನು ಹಾಕಿ ಕುಳಿತಿದ್ದಾರೆ ಎನ್ನುವುದು ಅರ್ಥವಾಗಲಿಲ್ಲ. 'ಏಕೆ ಸಾರ್, ಗೋಡೆಗೆ ಮುಖ ಹಾಕಿ ಕುಳಿತಿದ್ದೀರಾ ?' ಎಂದು ಕೇಳಿದೆ. ಪುತಿನ ಅದಕ್ಕುತ್ತರವಾಗಿ 'ಈಗ ಎಷ್ಟು ಗಂಟೆ ? ಹೇಳಿ' ಎಂದರು. ನಾನು 'ಈಗ ಸಂಜೆ ಆರು ಗಂಟೆ' ಎಂದೆ. ಅದಕ್ಕೆ ಅವರು ಹೀಗೆಂದರು 'ಅಂದರೆ ಈಗ ಸೂರ್ಯಾಸ್ತದ ಸಮಯ ಅಲ್ಲವೆ ? ಅಂದರೆ ಅಸ್ತಮಿಸುತ್ತಿರುವ ಸೂರ್ಯನಾರಾಯಣನಿಗೆ ಅರ್ಘ್ಯ ನೀಡುವ ಸಮಯ. ಅದಕ್ಕೇ ನಾನು ಅವನಿಗೆ ಮುಖ ಮಾಡಿಕುಳಿತಿದ್ದೇನೆ. ಸರಿ ತಾನೆ ?'

ಈ ಮಾತು ಕೇಳಿ ನನಗೆ ಒಂದು ಹೊಸ ದರ್ಶನದ ಮಿಂಚು ಹೊಳೆದಂತಾಯಿತು. ಪುತಿನ ಅವರಿಗೆ ಆಗ ತೊಂಬತ್ತು ದಾಟಿತ್ತು. ಆ ಕಾರಣ ಕಣ್ಣಲ್ಲಿ ದೃಷ್ಟಿ ಇರಲಿಲ್ಲ. ಆದರೆ ಅಂತದೃಷ್ಟಿ ಎಷ್ಟು ಚುರುಕು? ಕಣ್ಣ ದೃಷ್ಟಿ ಚೆನ್ನಾಗಿರುವ ನಾನು ನೋಡಿದ್ದು ಅವರ ಮುಂದಿದ್ದ ಬರೀ ಗೋಡೆಯನ್ನು ಮಾತ್ರ. ಅವರ ಅಂತರ್‌ದೃಷ್ಟಿ ಗೋಡೆಯನ್ನು ದಾಟಿ, ಹೊರಗೆ ದೂರದ ದಿಗಂತದಲ್ಲಿ ಮುಳುಗುತ್ತಿದ್ದ ಸೂರ್ಯನನ್ನು ಕಾಣುತ್ತಿತ್ತು. ಕವಿದರ್ಶನ ಅಂದರೆ ಇದೇ ತಾನೆ ?

ಅವರಿಗೆ ಅರವತ್ತು ತುಂಬಿದಾಗ ಅವರು ಬರೆದ ಕವನವೊಂದರಲ್ಲಿ ಹೀಗೆ ಹೇಳುತ್ತಾರೆ 'ನಾನು ಭೂಮಿಯೆಂಬ ವಿಮಾನದಲ್ಲಿ ಕುಳಿತು ಸೂರ್ಯನಾರಾಯಣನಿಗೆ ಅರವತ್ತು ಪ್ರದಕ್ಷಿಣೆ ಹಾಕಿದ್ದೇನೆ.' ಭೂಮಿ ವರ್ಷಕ್ಕೊಮ್ಮೆ ಸೂರ್ಯನನ್ನು ಸುತ್ತುತ್ತದೆ ಎಂಬ ವೈಜ್ಞಾನಿಕ ಸತ್ಯ ಎಲ್ಲರಿಗೂ ಗೊತ್ತು. ಅದನ್ನು ಪುತಿನ ನೋಡಿದ ದೃಷ್ಟಿ ಹೇಗಿದೆ ನೋಡಿ. ಇದೇ ಅವರ ವೈಶಿಷ್ಟ್ಯ.

(ದಿ. 22.8.04ರಂದು ಶಿವರಾಮ ಕಾರಂತ ವೇದಿಕೆಯ ಸಮಾರಂಭದಲ್ಲಿ ಮಾಡಿದ ಉಪನ್ಯಾಸದ ಒಂದು ತುಣುಕು)

# ಹುಚ್ಚು ಮನಸ್ಸಿನ ನೂರಾರು ಮುಖಗಳು

- ಎಸ್.ಆರ್. ವಿಜಯಶಂಕರ

ದಿವಂಗತ ದ.ಭಾ. ಕುಲಕರ್ಣಿಯವರು ಬಹಳ ಹಿಂದೆ ಪ್ರಕಟಿಸಿದ ವ್ಯಕ್ತಿ ಚಿತ್ರಗಳ ಸಂಗ್ರಹ 'ಹಕ್ಕಿನೋಟ'ದಲ್ಲಿ ಡಾ. ಕೋಟ ಶಿವರಾಮ ಕಾರಂತರ ವ್ಯಕ್ತಿಚಿತ್ರಣ ಪ್ರಾರಂಭವಾಗುವುದು 'ವಜ್ರಾದಪಿ ಕಠೋರಾಣಿ, ಮೃದೂನಿ ಕುಸುಮಾದಪಿ' ಎಂಬ ಘೋಷ ವಾಕ್ಯದಿಂದ. ಇದು ಪ್ರಾಚೀನ ಸುಭಾಷಿತವೊಂದರ ಸಾಲು. ಅತ್ಯಂತ ಆಧುನಿಕ ಚಿಂತನೆಯುಳ್ಳ ಕಾರಂತರಿಗೆ ಸಮಂಜಸವಾದ ವಾಕ್ಯ. ಆದಿಯಿಂದಲೂ ಮನುಷ್ಯ ನಂಬಿಕೊಂಡು ಬಂದ ಮೂಲಭೂತ ಮೌಲ್ಯಗಳನ್ನು ಆಧರಿಸಿದ ಚಿಂತನಾಕ್ರಮ ಕಾರಂತರದ್ದು. ಪ್ರಾಮಾಣಿಕವಾಗಿರಬೇಕು, ಸುಳ್ಳು ಹೇಳಬಾರದು, ಮೋಸ ಮಾಡಬಾರದು ಎಂಬ ನಂಬಿಕೆ. ನಮ್ಮ ಸುತ್ತಲಿನ ಸಮಾಜ ಪ್ರಕೃತಿಯನ್ನು ತೆರೆದ ಮನಸ್ಸಿನಿಂದ ನೋಡುವ, ತಪ್ಪುಗಳನ್ನು ತಿದ್ದಿಕೊಂಡು, ತಿಳಿಯದ್ದನ್ನು ಕಲಿಯುವ ಮನಸ್ಸಿರಬೇಕು - ಹೀಗೆ ನೇರ ಸರಳ ತತ್ವಗಳಿಂದ ಬದುಕನ್ನು ಸದಾ ಅರಿತುಕೊಂಡು ಅರ್ಥೈಸಿಕೊಳ್ಳಲು ಹಂಬಲಿಸುವ, ಎಂದಿಗೂ ಮುಗಿಯದ ಜ್ಞಾನ ತೃಷೆಯುಳ್ಳ ಕಾರಂತರು ಮನಸ್ಸಿನ ಈ ಹುಚ್ಚಿಗೆ ಹತ್ತು ಮುಖಗಳನ್ನು ಗುರುತಿಸಿಕೊಂಡಿದ್ದರು.

ಜೀವನ ಚರಿತ್ರೆ ಬರೆದಾಗ ಕಾರಂತರು ಅದನ್ನು ಅರ್ಥಪೂರ್ಣವಾಗಿ 'ಹುಚ್ಚು ಮನಸ್ಸಿನ ಹತ್ತು ಮುಖಗಳು' ಎಂದು ಕರೆದರು. ಕಲಾವಿದ ಕೆ.ಕೆ. ಹೆಬ್ಬಾರರು ಬರೆದ ಕಾರಂತರ ರೇಖಾಚಿತ್ರ ಅದರ ಮುಖಪುಟಕ್ಕೆ ಬಹು ಸೊಗಸಾಗಿ ಒಪ್ಪುತ್ತಿತ್ತು. ಪದ ಜೋಡಣೆಯ ಸೊಗಸಿಗಾಗಿ ಮಾತ್ರ ಅದು ಹತ್ತು ಮುಖಗಳು. ಆದರೆ ಕಾರಂತರ ಬದುಕಿನ ವಾಸ್ತವದಲ್ಲಿ ಅದನ್ನು ಬಹುಶಃ ಹತ್ತಾರು ಅಥವಾ ನೂರಾರು ಮುಖಗಳು ಎಂದರೆ ಸರಿ ಅನಿಸುತ್ತದೆ. ಆದ್ದರಿಂದಲೇ 1962ರಲ್ಲಿ 'ಹುಚ್ಚುಮನಸ್ಸಿನ ಹತ್ತು ಮುಖಗಳು' ಎರಡನೇ ಆವೃತ್ತಿ ಪ್ರಕಟವಾದ ಬಳಿಕ 'ಸ್ಮೃತಿಪಟಲದದಿಂದ' ಎಂಬ ಅವರ ಜೀವನ ಚರಿತ್ರೆಯ ಮೂರು ವಿಭಿನ್ನ ಭಾಗಗಳು ಪ್ರಕಟವಾದವು. 1983ರಲ್ಲಿ 'ಹುಚ್ಚು ಮನಸ್ಸಿನ' ತೃತೀಯ ಮುದ್ರಣ ಹೊರಬಂತು. ಇದೀಗ ಪುನಃ ಸಾಗರದ ಅಕ್ಷರ ಪ್ರಕಾಶನದವರು ನಾಲ್ಕನೇ ಮದ್ರಣ (1991)ವನ್ನು ಹೊರತಂದಿದ್ದಾರೆ. ಕಾರಂತರ ಜೀವನಚರಿತ್ರೆಯ ಮುದ್ರಣಗಳು ಹೊರಬಂದಷ್ಟೂ ಜನ ಅದನ್ನು ಓದಿ ಸ್ವಲ್ಪ

ಸಮಯದಲ್ಲಿ ಮುಂದಿನ ಮುದ್ರಣವನ್ನು ಎದುರು ನೋಡುತ್ತಾರೆ ಎಂಬುದೇ ಈ ಪುಸ್ತಕದ ಹಿರಿಮೆಯನ್ನು ಸಾರುತ್ತದೆ.

ನಮ್ಮ ಸಮಾಜದಲ್ಲಿ ಬರಹಗಾರನಾಗಿ ದೊಡ್ಡ ಹೆಸರು ಬಂದೊಡನೆ ಆತನ ಸುತ್ತ ಒಂದು ಪ್ರಭಾವಳಿ ಉಂಟಾಗುತ್ತದೆ. ಅದರ ಪ್ರತಿಭೆಯಿಂದ ಕಣ್ಣು ಕುಕ್ಕಿ ಸ್ವತಃ ಲೇಖಕರಿಗೇ ಅನೇಕ ಸಲ ತಮ್ಮ ಸಾರ್ವಜನಿಕ ವ್ಯಕ್ತಿತ್ವದೆದುರು, ತಾವು ನೋವು-ನಲಿವುಗಳುಳ್ಳ ಸಾಮಾನ್ಯ ಮನುಷ್ಯರು ಎಂಬ ಮೂಲ ಅಂಶವೇ ಮರೆತುಹೋಗುತ್ತದೆ. ಆದರೆ ಕಾರಂತರು ಎಂದೂ ಮನುಷ್ಯತ್ವದ ಮೂಲ ಸಭ್ಯೆಯನ್ನು ಮರೆತವರೇ ಅಲ್ಲ. ಈಗ್ಗೆ ಕೆಲವು ದಿನಗಳ ಹಿಂದೆ ಉದಯವಾಣಿಯ ಓದುಗರ ಪತ್ರ ವಿಭಾಗದಲ್ಲಿ, ಸಾಲಿಗ್ರಾಮ ಮಂಡಲ ಪಂಚಾಯಿತಿಯ ರಸ್ತೆಗಳ ನಿರ್ಮಾಣದ ಸುಳ್ಳು ಹೆಗ್ಗಳಿಕೆಗಳನ್ನು ಅವರು ಬಯಲಿಗೆಳೆದಿದ್ದರು.

ತಮ್ಮ ಜೀವನಚರಿತ್ರೆಗೆ ಈ ಹೆಸರು ಯಾಕೆ ಎಂಬುದನ್ನು ಕಾರಂತರು ಬಹು ಸೂಕ್ಷ್ಮವಾಗಿ ವಿಶ್ಲೇಷಿಸುತ್ತಾರೆ - 'ನನ್ನ ಮನಸ್ಸನ್ನು ಹುಚ್ಚೆಂದೇತಕ್ಕೆ ಕರೆಯಬೇಕು? ಈ ಹುಚ್ಚುತನ ತನಗೆ ಬೇಡವಾದುದರಿಂದ ಎಂದಲ್ಲ; ಬದಲು ಅದು ಮೆಚ್ಚುಗೆಯಾದುದರಿಂದ. ಅಂಥ ಹುಚ್ಚುತನದಿಂದಾಗಿಯೇ ಬೇಡದ ನೂರಾರು ಸಾಹಸಗಳನ್ನು ಮಾಡಿ ನನ್ನ ಮತ್ತು ಜಗತ್ತಿನ ಹುಚ್ಚುತನಗಳು ನನಗೆ ವ್ಯಕ್ತವಾಗಿವೆ'. ರಾಷ್ಟ್ರಭಕ್ತಿ, ಸ್ವದೇಶಿ, ವ್ಯಾಪಾರ, ಪತ್ರಿಕೋದ್ಯಮ, ಆಧ್ಯಾತ್ಮ ಸಾಧನೆ, ಕಲೆಯ ಭಿನ್ನ ಭಿನ್ನ ಮುಖಗಳು - ಫೋಟೋಗ್ರಫಿ, ನಾಟಕ, ನೃತ್ಯ, ಚಿತ್ರ, ವಾಸ್ತು, ಸಂಗೀತ, ಸಿನಿಮಾ, ಸಮಾಜ ಸುಧಾರಣೆ, ಗ್ರಾಮೋದ್ಧಾರ, ಶಿಕ್ಷಣ ಪ್ರಯೋಗಗಳು, ಉದ್ಯೋಗ ಇವೆಲ್ಲವುಗಳ ಅವತಾರಗಳೂ, ಅವಾಂತರಗಳೂ ಆಗಿ ಹೋಗಿವೆ ಎಂದು ತಾವೇ ಸ್ವತೇವ ಹೇಳಿಕೊಳ್ಳುವ ಕಾರಂತರು, ಈ ಪುಸ್ತಕದ ಬಗ್ಗೆ ಹೀಗೆ ಹೇಳುತ್ತಾರೆ 'ಇದಕ್ಕೆ ಹುಚ್ಚು ಮನಸ್ಸಿನ ಹತ್ತು ಮುಖಗಳು ಎಂದು ಹೆಸರಿಸಿದ್ದೇನೆ. ತಂತಮ್ಮ ಮನಸ್ಸು ಹುಚ್ಚೆಂಬ ಅರಿವು ಎಲ್ಲ ಗಳಿಗೆಯಲ್ಲಿಯೂ ನಮಗೆ ಉಂಟಾಗುವುದಿಲ್ಲ. ಇನ್ನೊಬ್ಬರ ಹುಚ್ಚುತನ ನಮಗೆ ಕಾಣಿಸುವಷ್ಟು ಸುಲಭವಾಗಿ ನಮ್ಮದೇ ಹುಚ್ಚುತನ ನಮಗೆ ಕಾಣಿಸುತ್ತದೆಯೇ'. ಕಾಣಬೇಕೆಂಬ ಆಸೆಯೇನೋ ತನಗಿದೆ ಎನ್ನುವ ಕಾರಂತರು ತಾನಿರುವ ಸಮಾಜವನ್ನು ಬೇರೆಯಾಗಿ ನಿಂತು, ನೋಡಿ ತಿಳಿಯಲೆತ್ನಿಸಿದಂತೆ ತನ್ನ ಬಾಳನ್ನೂ ನೋಡಿ ತಿಳಿಯಲೆತ್ನಿಸಿದ ಪ್ರಯತ್ನವೇ ಈ ಜೀವನ ಚರಿತ್ರೆ.

ಬಹುಶಃ ಕಾರಂತರ ಜೀವನವನ್ನು ವೈಯಕ್ತಿಕ ಬದುಕೊಂದರ ಸಾಮಾಜಿಕ ಪ್ರಯೋಗ ಎನ್ನಬಹುದೇನೋ ? ನಿರಂತರ ಅಧ್ಯಯನ ಅಭ್ಯಾಸ ಹಾಗೂ ಒಂದಲ್ಲ ಒಂದು ಪ್ರಯೋಗ ಅಥವಾ ಪ್ರಯತ್ನಗಳಲ್ಲಿ ತೊಡಗಿರುವವರಿಗೆ ಪರಿಪೂರ್ಣತೆ ಒಂದು ಸತತ ಹುಡುಕಾಟ. ಅಂತಹವರಿಗೆ ಪರಿಪೂರ್ಣತೆಯ ಭ್ರಮೆಗಳಿರುವುದಿಲ್ಲ. ಪರಿಪೂರ್ಣತೆಯ

ಬಗ್ಗೆ ಕಾರಂತರೆ ಹೀಗೆ ಬರೆಯುತ್ತಾರೆ - 'ಇದೊಂದು ಪರಿಪೂರ್ಣತೆಯ ಆತ್ಮವೃತ್ತವಲ್ಲ. ನಾನು ಪರಿಪೂರ್ಣನೂ ಆಗಿಲ್ಲ. ಪೂರ್ಣತೆಯ ಒಂದಂಶವೂ ಆಗಿಲ್ಲ. ಈ ವಿಶ್ವವೇ ಪರಿಪೂರ್ಣತೆಗಾಗಿ ಹೆಣಗುತ್ತಿದೆಯೆಂದು ತಿಳಿದ ನಾನು, ಸರ್ವಜ್ಞ ಪಟ್ಟವನ್ನು ವಹಿಸಿಕೊಳ್ಳಲಾರೆ'. ಇಂತಹ ತಾತ್ವಿಕ ನಿಲುವನ್ನು ಹೇಳುತ್ತಿರುವಾಗಲೇ ಕಾರಂತರು ಎಂದೂ ಸರಳ ಸಣ್ಣ ವಾಸ್ತವ ಸತ್ಯಗಳನ್ನೂ ಮರೆಯುವುದಿಲ್ಲ. ಮೇಲೆ ಉದ್ಧರಿಸಿದ ಮಾತುಗಳನ್ನು ಕಾರಂತರು ಹೀಗೆ ಮುಂದುವರಿಸುತ್ತಾರೆ - 'ಇನ್ನೊಂದು ಅರ್ಥದಲ್ಲಿಯೂ ಕೂಡಾ ಇದು ಪರಿಪೂರ್ಣವಾಗಿಲ್ಲ. ನಾನು ಈಗ ಇಳಿ ವಯಸ್ಸಿಗೆ ಕಾಲಿರಿಸಿದ್ದೇನೆ. ಆದುದರಿಂದ ಈ ಬರವಣಿಗೆಯ ದಿನದ ತನಕ ಸಾಗಿದ ಚಿತ್ರವನ್ನು ಅದು ಕೊಡಬಲ್ಲದೇ ಹೊರತು ಪೂರ್ಣ ಜೀವನದ ಚಿತ್ರವನ್ನು ಕೊಡಲಾರದು'. ತೊಂಬತ್ತು ವರುಷ ತುಂಬಿರುವ ಡಾ. ಕೋಟ ಶಿವರಾಮ ಕಾರಂತರಿಗೆ ಶತಮಾನ ಬದುಕುವ ಆಸೆ ಇಲ್ಲ. ಬದಲಾಗಿ, ಪರರಿಗೆ ತಾನೊಂದು ಶಾರೀರಿಕ ಹೊರೆಯಾಗದಂತೆ ಬದುಕ ಬೇಕೆಂಬುದೇ ಅವರ ಇಚ್ಛೆ.

'ಬಾಳ್ವೆಯೇ ಬೆಳಕು' ಎಂಬ ತಮ್ಮ ಇನ್ನೊಂದು ಕೃತಿಯಲ್ಲಿ ಕಾರಂತರು ಬದುಕಿನ ಬಗ್ಗೆ ತಮ್ಮ ತಾತ್ವಿಕ ಚಿಂತನೆಗಳನ್ನು ದಾಖಲಿಸಿದ್ದಾರೆ. ಅನುಭವದ ಸಾರವಾಗಿ ಹೊರಬಂದ ಜೀವನಾನುಭವದ ಮಾತುಗಳವು. ಅನುಭವದ ಭಾಗವಾಗಿ ಉದಯಿಸುವ ಎಷ್ಟೋ ತಾತ್ವಿಕ ದರ್ಶನಗಳು ಅವರ ಕಾದಂಬರಿಗಳ ತುಂಬ ಹರಡಿ ಕುಳಿತಿವೆ. ತಾತ್ವಿಕ ವಿಚಾರಗಳು ಅನುಭವದ ಕುಲುಮೆಯಲ್ಲಿ ಕರಗಿ, ಒಂದು ಆಕಾರ ಪಡೆದುಬಂದಾಗ ನಮ್ಮನ್ನು ತಟ್ಟುವಷ್ಟು ಗಾಢವಾಗಿ ಕೇವಲ ಬುದ್ಧಿವಾದವಾಗಿ ಬಂದಾಗ ನಮ್ಮನ್ನು ಕಲಕುವುದಿಲ್ಲ. ಕಾರಂತರ ಕಾದಂಬರಿಗಳಲ್ಲಿ ಬದುಕನ್ನು ಅವರು ಪರಿಭಾವಿಸಿದ ಕ್ರಮ ಗೋಚರಿಸುತ್ತದೆ. ಕಾರಂತರ ಆತ್ಮಚರಿತ್ರೆ ಅವರ ಕೃತಿಗಳನ್ನು ಇನ್ನಷ್ಟು ಹೆಚ್ಚು ಅರ್ಥಮಾಡಿಕೊಳ್ಳಲು ಸಹಕಾರಿ.

'ಯಶಸ್ಸು' ಆಧುನಿಕ ಬದುಕಿನ ಪ್ರತಿಯೊಬ್ಬ ಮನುಷ್ಯನ ಹಂಬಲ. ಸ್ಪರ್ಧಾತ್ಮಕ ಯುಗದ ಪ್ರೇರಣಾಶಕ್ತಿ ಅದೆಂದು ಬಣ್ಣಿಸಿದವರೂ ಇದ್ದಾರೆ. ಹಿಂದಿಗೂ ಇಂದಿಗೂ ಜೀವನದ, ಯಶಸ್ಸಿನ ಕಲ್ಪನೆಯೇ ಬದಲಾಗಿದೆ. ಇಂದು ಪ್ರಶಸ್ತಿಗಳ ಸರಮಾಲೆಗಳನ್ನೇ ಪಡೆದ, ನೂರಾರು ಪುಸ್ತಕಗಳ ಕರ್ತೃ ಕಾರಂತರು 'ಯಶಸ್ವಿ' ಎಂದು ಅನೇಕರಿಗೆ ಕಾಣುತ್ತದೆ. ಅವರ ಜೀವನಚರಿತ್ರೆ ಬದುಕಿನಲ್ಲಿ ಅವರು ಕಂಡ ಅನೇಕ ಸೋಲಿನ, ಅನುಭವಿಸಿದ ಸಂಕಷ್ಟಗಳ ವಿಚಾರ ಹೇಳುತ್ತದೆ. ಯಶಸ್ಸಿನ ಬಗ್ಗೆ ಕಾರಂತರು ಹೇಳುವ ಈ ಮಾತುಗಳು ಅರ್ಥಪೂರ್ಣ. 'ಯಶಸ್ಸು ನಮ್ಮಂತೆ ಹೋರಾಡುವ ಇತರ ಪ್ರಾಣಿಗಳ ಮುಂದೆ ನಮ್ಮ ಹಿರಿಮೆಯನ್ನು ತೋರಿಸಬಹುದಾದರೂ ಆ ಹಿರಿಮೆಯಿಂದ ಹೆಮ್ಮೆ ಉದಯಿಸಬಹುದಾದರೂ, ವ್ಯಕ್ತಿಯ ತೂಕವನ್ನು ಅದೊಂದೇ ಹೇಳಲಾರದು.

ಸಮಾಜದ ಪ್ರವಾಹಕ್ಕೆ ಅನುಕೂಲವಾಗಿ ಹೋಗುವವನಿಗೆ, ಗಾಳಿಗೆ ತಕ್ಕಂತೆ ಕೊಡೆಯನ್ನು ಹಿಡಿಯಬಲ್ಲವನಿಗೆ, ಯಶಸ್ಸು ಸುಲಭವಾಗುವಷ್ಟು ಇತರರಿಗೆ ಆಗಲಾರದು'. ಅದನ್ನು ಅರ್ಥೈಸಿಕೊಳ್ಳುವಾಗ ಮನಸ್ಸು ಅನುಭವಿಸುವ ಆಕಸ್ಮಿಕಗಳನ್ನೂ, ಆಶ್ಚರ್ಯಗಳನ್ನೂ ಅವರು ಹೇಳುವ ರೀತಿ - 'ಲೌಕಿಕದ ಯಾವ ಯಶಸ್ಸೇ ಆಗಲಿ ಬರಿಯ ನಮ್ಮನ್ನು ಹೊಂದಿಲ್ಲ ಎಂಬುದನ್ನೂ ಮನಗಂಡಿದ್ದೇನೆ. ವಿಧಿಯೋ, ಅದೃಷ್ಟವೋ, ಅನುಕೂಲ ಸಂದರ್ಭವೋ, ಹೇಳಹೆಸರಿಲ್ಲದ ಇನ್ನೇನೋ - ಕೆಲವು ವೇಳೆ ನಮ್ಮ ಪ್ರಯತ್ನಕ್ಕೆ ಮಿಗುವ ಯಶಸ್ಸನ್ನು ದೊರಕಿಸಿಕೊಡುತ್ತದೆ. ನಾವು ಅತ್ಯಂತ ಶ್ರಮಪಟ್ಟಾಗಲೂ ಅದೇ ಯಶಸ್ಸು ನಮ್ಮನ್ನು ಕುಕ್ಕಿ ಮೂದಲಿಸಿ ಹೊರಟು ಹೋಗುವುದುಂಟು.'

ಸೋಲು-ಗೆಲುವು ಎರಡನ್ನೂ ತಮ್ಮ ಅನುಭವಗಳ ಹಿನ್ನೆಲೆಯಲ್ಲಿ ನಿರ್ಭಾವದಿಂದ ತೂಗಬಲ್ಲ ಕಾರಂತರಿಗೆ ಅನುಭವಗಳನ್ನು ದೊರಕಿಸಿಕೊಡುವುದರಲ್ಲಿ ಸೋಲು-ಗೆಲುವಿನಷ್ಟೆ ಮುಖ್ಯ ಅನಿಸುತ್ತದೆ. 'ಸೋತವನಿಗೆ ತಿರುತಿರುಗಿ ಕೆಲಸ ಮಾಡಲು ಅವಕಾಶವಿದೆ. ಗೆದ್ದವನಿಗೆ ಆ ಕೆಲಸ ಮುಗಿದಂತೆಯೇ. ಎಲ್ಲಿಯ ತನಕ ನಾವು ಕೆಲಸದಲ್ಲಿ ಆಸಕ್ತಿಯನ್ನು ವಹಿಸುತ್ತೇವೋ, ಅದರ ಅವಶ್ಯಕತೆಯನ್ನೂ, ಚೆಲುವನ್ನೂ ಮನಗಾಣುತ್ತೇವೋ ಅಲ್ಲಿಯ ತನಕ ಕೆಲಸವೇ ಆನಂದ. ಸೋಲು ತಂದುಕೊಡುವ ವಸ್ತು ಪ್ರಪಂಚದ ಅರಿವೆಂಬುದು ಕೂಡಾ ಒಂದು ಆನಂದವೇ. ವ್ಯಕ್ತಿಯು ಎಚ್ಚರವುಳ್ಳವನಾದರೆ, ಸೋಲು ದೊರಕಿಸಿಕೊಡುವ ಅನುಭವಗಳೂ ವ್ಯರ್ಥವಾಗವು.'

'ಹುಚ್ಚು ಮನಸ್ಸಿನ ಹತ್ತು ಮುಖಗಳು' ಈ ಮೊದಲ ಮುದ್ರಣಗಳಲ್ಲಿ ಮತ್ತು 'ಸ್ಮೃತಿ ಪಟಲದಿಂದ' ಭಾಗಗಳಲ್ಲಿ ಬಂದ ವಿವರಗಳು ಕನ್ನಡ ಓದುಗರಿಗೆ ತಿಳಿದದ್ದೇ ಆಗಿದೆ. ಆದ್ದರಿಂದ ಹಿಂದಿನ ಮುದ್ರಣದ ಬಳಿಕ ಈ ಮುದ್ರಣದ ಸಂದರ್ಭದಲ್ಲಿ ಸೇರಿಸಿಕೊಂಡ ಭಾಗಗಳ ಬಗ್ಗೆ ಈ ಪರಿಚಯಾತ್ಮಕ ಬರಹದಲ್ಲಿ ಸ್ವಲ್ಪ ಹೇಳಬೇಕು.

### ಪರಿಸರ ಆಂದೋಲನ

'ವ್ಯಕ್ತಿಯ ಆರೋಗ್ಯಕ್ಕೂ - ಮನಸ್ಸಿಗೂ ಸಂಬಂಧವಿದೆ; ಆತನ ಸಂಸಾರಕ್ಕೂ, ಅವನಿಗೂ ಸಂಬಂಧವಿದೆ; ಸಮಾಜಕ್ಕೂ, ಅವನಿಗೂ ಸಂಬಂಧವಿದೆ. ಇವು ಕೆಲ ಕೆಲವು ದೃಷ್ಟಿಗಳಿಂದ ವ್ಯಕ್ತಿ ಜೀವನವನ್ನು ಹಿಗ್ಗಿಸುವ, ಕುಗ್ಗಿಸುವ ಕೆಲಸವನ್ನು ಮಾಡಿಯೇ ಮಾಡುತ್ತವೆ. ಹೀಗಾಗಿ ಈ ಜೀವನಚರಿತ್ರೆಯ, ಕೆಲವಾದರೂ ಪುಟಗಳ ಸೇರ್ಪಡೆಗೆ ಅವಕಾಶವಿತ್ತಿದೆ' ಎಂದು 'ತಾನಾಗಿ ಬಂದ ಒಂಬತ್ತನೆಯ ದಶಕ' ಅಧ್ಯಾಯದಲ್ಲಿ ಕಾರಂತರು ಹೇಳುತ್ತಾರೆ. ಸಮಾಜ ವ್ಯಕ್ತಿಯ ಸಂಬಂಧದಲ್ಲಿ ಕಾರಂತರು ರಾಜಕೀಯ ಸತ್ಯಗಳನ್ನು ಎಂದೂ ಮರೆತವರಲ್ಲ. ತಮ್ಮ ಇಳಿವಯಸ್ಸಿನಲ್ಲೂ ಪರಿಸರ ಆಂದೋಲನದ ಮುಂಚೂಣಿಯಲ್ಲಿರುವ ಕಾರಂತರು ಪ್ರತಿಭಟನೆಯ ಪ್ರಜಾಸತ್ತಾತ್ಮಕ ಮಾರ್ಗವನ್ನು ಎಂದು ಮರೆತವರಲ್ಲ. ನಮ್ಮ ಹಳ್ಳಿಯ ಗಾದೆ ಮಾತಿನಂತೆ 'ಮರ್ಯಾದೆ ಬಿಟ್ಟವ ಊರಿಗೆ

ದೊಡ್ಡವ' ಎಂಬುದನ್ನು ನಮ್ಮ ಸಾರ್ವಜನಿಕ ಜೀವನ ರಾಷ್ಟ್ರೀಯ ಸತ್ಯವನ್ನಾಗಿ ಸಾರಿತು ಎಂಬುದನ್ನು ಕಾರಂತರು ಬರೆಯುವಾಗ ಆ ನೋವಿನ ಆಳದಲ್ಲಿ ಸದ ಸೊಲ್ಲೊಡೆಯಲು ತವಕಿಸುವ ಪ್ರಜಾಸತ್ತೆಯ ದನಿ ಜಾಗೃತವಾಗಿರುವುದೂ ಗೋಚರಿಸುತ್ತದೆ. ಸಾರ್ವಜನಿಕ ಜೀವನದಲ್ಲಿ ಕಾಣುವ ವಂಚನೆ ಎದುರು ಹತಾಶೆಯಿಂದ ಎಂದೂ ಅವರು ಕೈಚೆಲ್ಲಿ ಕುಳಿತವರಲ್ಲ. ಕೋರ್ಟಿನಿಂದ ಹಿಡಿದು ಸಾರ್ವಜನಿಕ ಪ್ರದರ್ಶನದವರೆಗೆ ಪ್ರತಿಭಟನೆಯ ಎಲ್ಲಾ ಅಧಿಕೃತ ಮಾರ್ಗಗಳನ್ನೂ ಅವರು ಉಪಯೋಗಿಸುವವರೆ.

ಬೈಕಾಡಿ ವೆಂಕಟಕೃಷ್ಣರಾಯರು ಕೆಲವು ವರ್ಷಗಳ ಹಿಂದೆ ಸಂದರ್ಶನವೊಂದರಲ್ಲಿ 'ನಿಮ್ಮ ಆರೋಗ್ಯದ ಗುಟ್ಟೇನು?' ಎಂದು ಕೇಳಿದ್ದರು. ಕಾರಂತರ ಹಿಂದೊಂದು ಕಾಲದ ಶ್ರದ್ಧೆಯಾಗಿದ್ದ ಯೋಗ, ಬ್ರಹ್ಮಚರ್ಯ ಇತ್ಯಾದಿಗಳೇನಾದರೂ ಇದಕ್ಕೆ ಕಾರಣವೆ ಎಂದೂ ಸೂಚಿಸುವ ಧಾಟಿ ಈ ಪ್ರಶ್ನೆಯಲ್ಲಿತ್ತು. ಕಾರಂತರು ಸ್ಪಷ್ಟವಾಗಿ ಇದು ಪ್ರಕೃತಿ ಕೊಟ್ಟ ಕೊಡುಗೆ. ಇದರಲ್ಲಿ ನನ್ನದೇನೂ ಸಾಧನೆಯಿಲ್ಲ. ಯೋಗ ಮೊದಲಾದ ಹಿಂದಿನ ಸಾಧನೆಗಳೂ ಇದಕ್ಕೆ ಕಾರಣವಲ್ಲ ಎಂದು ಸ್ಪಷ್ಟವಾಗಿ ಸಾರಿಬಿಟ್ಟರು. 'ಸ್ವಪ್ರಯತ್ನವೇನೂ ಇಲ್ಲದೆ ನಿಸರ್ಗ ಉಳಿಸಿರುವ ಹಿರಿಯರನ್ನು ಕಂಡು, ಹಿರಿಯರನ್ನು ಮನ್ನಿಸುವ ನಮ್ಮ ಜನರ ಸಂಪ್ರದಾಯಶೀಲತೆ'ಯನ್ನು ಕಾರಂತರು ಸಹಿಸಿಕೊಳ್ಳುವಾಗಲೂ, ಮನುಷ್ಯ ಬೆಳೆಯುವುದು ಸ್ವಪ್ರಯತ್ನದಿಂದ ಮತ್ತು ತನ್ನ ನಡೆ-ನುಡಿಗಳಿಂದ ಎಂಬ ಗಾಢ ನಂಬಿಕೆ ಅವರಿಗೆ.

ಕಾರಂತರ ಬದುಕಿನ ಮುಖ್ಯಪಥದಲ್ಲಿ ಅವರಿಗೆ ಸಂಗಾತಿಯಾಗಿ ಬಂದ 'ಲೀಲೆ' ಅವರ ಮಡದಿಯಾದದ್ದು 1936ರಲ್ಲಿ. ತಮ್ಮ ದಾಂಪತ್ಯ ಜೀವನ ಸಾಕಷ್ಟು ವರ್ಷ ಸುಂದರವಾಗಿದ್ದ ಬದುಕಲ್ಲಿ ಹಿರಿಯ ಮಗ ಹರ್ಷನ ಮರಣದ (1961) ಬಳಿಕ ಅವರ ಮಡದಿಯ ಬದುಕಿನಲ್ಲಿ ವಿಭ್ರಮೆಯ ಚಹರೆ ಕಾಣಿಸತೊಡಗಿದವು. 'ಆಗಾಗ ಆಕೆಗೆ ಮಂಕು, ಸಂತಾಪ ಉದ್ವೇಗಗಳ ವಿವಿಧ ಮನಸ್ಥಿತಿಗಳು ತಟ್ಟತೊಡಗಿದವು. ಭಯಭೀತ ಗಳಿಗೆಗಳು ಕಾಡಿದಷ್ಟೇ ತೀವ್ರತೆಯಿಂದ ದೈವಭಕ್ತಿಯ ಉತ್ಪಾತಗಳೂ, ಭ್ರಮೆಗಳೂ, ಸಾಯಿಬಾಬನ ಗೀಳೂ ಕಾಡತೊಡಗಿತು. ಆಕೆ ಯಾವ ದಿನ ಎಲ್ಲಿದ್ದಾಳು, ಏನು ಮಾಡಿಯಾಳು ಎಂಬ ಸುಳಿವು ಸಹ ಸಿಗದ ರೀತಿಯ ಸಂಚಾರವೂ ಸೇರಿಕೊಂಡು, ಅವಳ ರಕ್ಷಣೆ, ಚಿಕಿತ್ಸೆ, ಮನೋವಿಕಾರಗಳ ವಿವಿಧ ಸ್ಥಿತಿಗಳು ನನ್ನ ಬೆನ್ನು ಹತ್ತುತ್ತಲೇ ಹೋದವು. ಇದು ಒಂದೆರಡು ದಿನದ ವ್ಯವಹಾರವಾಗದೆ 28 ವರ್ಷಗಳ ಕಾಲ ನನ್ನ ತಾಳ್ಮೆಯನ್ನು, ಕರುಣೆಯನ್ನು, ಕೋಪ-ತಾಪಗಳನ್ನು ಕೆಣಕುತ್ತ ಸರಿಯಿತು' ಎಂದು ಕಾರಂತರು ಬರೆಯುತ್ತಾರೆ. ಕೊನೆಗಾಲದಲ್ಲಿ ಅವರ ದೈಹಿಕ ಸಂಕಟವನ್ನು ಮುಂದುವರಿಸಿ ಕೇವಲ ಉಸಿರಾಡಿಸುವ ಪ್ರಯತ್ನವಾಗಿ ಕಾಣಿಸಿದಾಗ, ಕಾರಂತರು 'ಈ ಪರಿಸ್ಥಿತಿಯಲ್ಲಿ ನನ್ನ ಕರ್ತವ್ಯ ಏನು - ಎಂಬ ತಳಮಳವೂ ಕಾಣಿಸಿತು' ಎನ್ನುತ್ತಾರೆ.

1986ರಲ್ಲಿ ಲೀಲಾ ಕಾರಂತರು ತೀರಿಕೊಂಡು, ಅವರ 50 ವರ್ಷಗಳ ದಾಂಪತ್ಯ ಮುಗಿದಾಗ ಅವರ ಮಡದಿಯಲ್ಲಿದ್ದ ಮಾನವೀಯತೆ ಅವರಿಗೆ ಮೊದಲಿಗೆ ನೆನಪಿಗೆ ಬರುತ್ತದೆ. 'ಅಷ್ಟೊಂದು ಕಾಲವೂ ಅತಿಥಿಗಳ ಪಾಲಿಗೆ ಎಂದೂ ಬೇಸರ ತರದ, ಇನ್ನೊಮ್ಮೆ ಬರುತ್ತೀರಲ್ಲ' ಎಂದು ಕೇಳಿದ ಉಸಿರು ಮುಂದೆ ಕೇಳಿಸದಾಯಿತು. ಅದರೊಡನೆಯೇ ಊರೂರು ತಿರುಗಿ, ಅನೇಕರ ಪಾಲಿನ ಆತಿಥ್ಯವನ್ನು ಉದ್ದಕ್ಕೂ ಅರಗಿಸಿಕೊಂಡು ಬಂದಿದ್ದ ನನ್ನ ಪಾಲಿಗೆ 'ಇದು ನನ್ನ ಮನೆ. ಬಂದವರಿಗೆ ಒಂದು ಥಾಲಿ ತಂಪು ಪಾನೀಯವನ್ನಾದರೂ ಕೊಡಬಲ್ಲೆ' ಎಂಬ ಆತ್ಮ ವಿಶ್ವಾಸ ಕಳಚಿತು.'

ಅವರ ಪ್ರವಾಸ, ಯಕ್ಷರಂಗ, ಇನ್ನಿತರ ಅನೇಕ ವಿಚಾರಗಳ ಬಗ್ಗೆ ನಮಗೆ ತಿಳಿದಿದೆ. ಬರಹಗಳನ್ನು ಬಹಳ ವರ್ಷಗಳಿಂದ ಅವರು ಬಾಯಲ್ಲಿ ಹೇಳುತ್ತಾ ಹೋದಂತೆ, ಯಾರಾದರೂ ಕೂತು ಅಂಕಿಸಿಕೊಳ್ಳಬೇಕು. ಹೀಗೆ, ಸಾಲಿಗ್ರಾಮದ ಅವರ ವಾಸದಲ್ಲಿ ಬರಹಗಳನ್ನು ಅಂಕಿಸಿಕೊಳ್ಳಲು ಬಂದ ಮಾಲಿನಿ ಮಲ್ಯ ಎಂಬುವರ ಬಗ್ಗೆ ಒಂದು ಆತ್ಮೀಯ ಚಿತ್ರಣ ಇಲ್ಲಿದೆ. ಅಲ್ಪವೇತನದ ಈ ಕೆಲಸವನ್ನು ಅವರು ಚಾಕರಿಯ ಹಂಬಲಕ್ಕಿಂತ ಜ್ಞಾನದ ಹಂಬಲವನ್ನಾಗಿ ಮಾಡಿಕೊಂಡರು. ಆ ವಿಷಯಗಳು ಬಿಡುವಿನ ಸಂಭಾಷಣೆಗೆ ಅನುಕೂಲವಾಯಿತು. ಕಾರಂತರು ಕೊಡುತ್ತಿದ್ದ ವೇತನದ ಹತ್ತು ಪಾಲು ವೇತನ ಸಿಗುವ ಉದ್ಯೋಗ ದೊರೆತ ಬಳಿಕವೂ ಸಂಜೆ ಅಲೆದಾಡುವಾಗ ಜೊತೆಯಲ್ಲಿ ಬರುತ್ತಾ ಜ್ಞಾನ ಪಿಪಾಸೆ ತೋರಿಸಿದವರು. ಇಂತಹ ಒಂದು ಮಾನವೀಯ ಸಂಬಂಧ ಬಂಧುಗಳ ಬೇಗುದಿಗೆ ಕಾರಣವಾದ ಹಿನ್ನೆಲೆಯಲ್ಲಿ ಕಾರಂತರು ಹೇಳುತ್ತಾರೆ- 'ಈ ಸಹಚರ್ಯದಿಂದಾಗಿ ನಮ್ಮ ಮನೆ ಅವರ ಮನೆಯಾಯಿತು. ನನ್ನ ಮಡದಿಯ ಆರೈಕೆಯಲ್ಲಿ ಪಾಲನ್ನು ವಹಿಸಿ ನನ್ನ ಚಿಂತೆಯನ್ನು ತಗ್ಗಿಸಿದಳು. ಆಕೆ ಒಣ ಹರಟೆಗೊಬ್ಬಳು ಗೆಳತಿಯಾಗುವ ಬದಲು ಸಂಭಾಷಣೆಗೊಬ್ಬಳು ಸ್ನೇಹಿತೆಯಾದಳು. ಇದರಿಂದಾಗಿ ನನ್ನ ಬಂಧುಗಳ ಕಣ್ಣಿಗೆ ಅವಳು ಕಸವಾಗಿ ಕಾಣಿಸಿದ್ದೂ ಇದೆ. ಆದುದರಿಂದ ಅವಳ ಪಾಲಿಗೆ ನನ್ನ ಸ್ನೇಹವೆಂಬುದು ವಿಶೇಷ ದುಃಖಕ್ಕೆ ಕಾರಣವಾದ ಗಳಿಗೆಗಳು ಎಷ್ಟೋ ಇವೆ. ಆಕೆಯ ಯಾವುದೇ ಅಪರಾಧವಿಲ್ಲದೇ ಹೋದರೂ, ಆಕೆಯ ಮೇಲೆ ನಾನಿರಿಸಿದ ವಿಶ್ವಾಸ, ನನ್ನ ಬಂಧುಗಳ ಬೇಗುದಿಗೆ ಕಾರಣವಾದುವು. ಅವು ಅವಳ ನಿರ್ದೋಷಿ ಬದುಕಿಗೆ ಸಲ್ಲಬಾರದ ದುಃಖಕ್ಕೂ ಕಾರಣವಾಯಿತು.'

ಡಾ. ಕಾರಂತರ ಆತ್ಮ ಚರಿತ್ರೆಯೆಂದರೆ, ನಮ್ಮ ಸಾಂಸ್ಕೃತಿಕ ಸಾಮಾಜಿಕ ಸಂದರ್ಭದಲ್ಲಿ ವ್ಯಕ್ತಿತ್ವ ವಿಕಸನದ ಅಗಾಧ ಸಾಧ್ಯತೆಗಳನ್ನು ತೆರೆದಿಟ್ಟು ತೋರಿಸಿದಂತೆ. ದ.ಕ. ಜಿಲ್ಲೆಯಲ್ಲಿ 'ಹುಚ್ಚು' ಎಂಬುದಕ್ಕೆ 'ಲಹರಿ', 'ಹವ್ಯಾಸ', 'ಗೀಳು' ಮೊದಲಾದ ಅರ್ಥಗಳೂ ಇವೆ. ಬಹುಶಃ ಅವರ ಮನಸ್ಸು ಹುಚ್ಚಿಗೂ ಮಿಗಿಲಾದ್ದು. ಅದಕ್ಕೆ ಸದಾ ಉರಿಯುವ ಜ್ಞಾನದ ಹಸಿವು, ಅದರ ಮುಖಗಳು ಹತ್ತಲ್ಲ, ನೂರಾರಲ್ಲ ಸಾಧ್ಯತೆಗಳು ಸಾವಿರಾರು.

# ರಂಗಕ್ಕೇರಿದ ರಂಗಿನ ಮೂಕಜ್ಜಿ

- ಬಿ.ಆರ್. ನಾಗೇಶ್

ಆದಿ ಮಾನವನಿಂದ ಹಿಡಿದು ಚಾರಿತ್ರಿಕ ಕಾಲದ ಜನಜೀವನದಲ್ಲಿ ಬರುವ ಹೆಣ್ಣು-ಗಂಡಿಗೆ ಸಂಬಂಧಿಸಿದ ಸಮಸ್ಯೆಗಳು, ದೇವರ ಕುರಿತಾದ ಆಚರಣೆ - ತಾತ್ವಿಕ ನಿಲುವುಗಳನ್ನು ಹಿನ್ನೆಲೆಯಲ್ಲಿರಿಸಿ, ಇಪ್ಪತ್ತನೆಯ ಶತಮಾನದ ಮೊದಲ ಮೂರು ದಶಕಗಳ ಜನಜೀವನವನ್ನು ವಿಶ್ಲೇಷಿಸುವ ಶಿಲ್ಪವನ್ನು ಹೊಂದಿರುವ 'ಮೂಕಜ್ಜಿಯ ಕನಸುಗಳು' ಕಾರಂತರ ವೈಜ್ಞಾನಿಕ ಕುತೂಹಲಕ್ಕೆ ಸಾಕ್ಷಿಯಾಗಿ ನಿಂತಿರುವ ಕಾದಂಬರಿ. ಮೊದಮೊದಲು ಈ ಕಾದಂಬರಿಯಲ್ಲಿ ಹೇಳಿಸುವಂಥ ವಿನ್ಯಾಸ ಇಲ್ಲವೆಂದು ಅನಿಸಿದರೂ, ಕ್ರಮೇಣ ಅದು ಗೋಚರವಾಗುತ್ತದೆ. ಈ ವಿನ್ಯಾಸವನ್ನು ವೃತ್ತವೊಂದಕ್ಕೆ ಹೋಲಿಸಬಹುದು; ವೃತ್ತದ ಕೇಂದ್ರಬಿಂದು ಮೂಕಜ್ಜಿ-ವೃತ್ತದ ಪರಿಧಿಯಲ್ಲಿ ಹೆಣ್ಣು-ಗಂಡುಗಳೊಳಗಿನ ಸಮಸ್ಯೆ - ಆಕರ್ಷಣೆಗಳ ವಿಶ್ಲೇಷಣೆ ಮತ್ತು ಧಾರ್ಮಿಕ ನಿಯಮಾವಳಿಗಳಿರುವುದು. ಪರಿಧಿಯಿಂದ ಕೇಂದ್ರಕ್ಕೆ ಬರುವ ತ್ರಿಜ್ಯಗಳಲ್ಲಿ ಹಲವಾರು ವ್ಯಕ್ತಿತ್ವಗಳಿವೆ. ಈ ವ್ಯಕ್ತಿಗಳು ಕೇಂದ್ರದಿಂದ ಸೂಚನೆಗಳನ್ನೂ, ತಾರ್ಕಿಕ ಸಮಾಧಾನಗಳನ್ನು ಪಡೆಯುತ್ತವೆ. ಪರಿಧಿಯಲ್ಲಿ ಕಾಣಿಸುವ ವಿಚಾರಗಳಿಗೆ ಆದಿ ಅಂತ್ಯಗಳೇ ಇಲ್ಲ ಎಂದು ಮೂಕಜ್ಜಿ ಸೂಚಿಸುವುದು ಸತ್ಯವಾಗಿ ಕಾಣಿಸುವುದರಿಂದ, ಕಾದಂಬರಿಗೆ ಗಟ್ಟಿಯಾದ ನೆಲೆಗಟ್ಟು ಒದಗಿ ಬಂದಿರುತ್ತದೆ.

ಈ ಬಗೆಯ ವಿನ್ಯಾಸ ಇರುವ ಕಾದಂಬರಿಯ ನಾಟಕ ರೂಪವನ್ನು ರಂಗರೂಪಕ್ಕೆ ಇಳಿಸಿರುವ ಶ್ರೀ ಎಸ್. ರಾಮಮೂರ್ತಿಯವರ ಪ್ರಯತ್ನ ಪ್ರದರ್ಶನದ ಗುಣಾತ್ಮಕ ಅಂಶವಾಗಿದ್ದರೆ, ಮೂಲ ಕಾದಂಬರಿಯಲ್ಲಿ ಬರುವ ಸಂಭಾಷಣೆಗಳನ್ನು ಅದೇ ಗ್ರಾಂಥಿಕ ಭಾಷೆಯಲ್ಲಿ ಉಳಿಸಿಕೊಂಡದ್ದು ಪ್ರದರ್ಶನದ ಋಣಾತ್ಮಕ ಅಂಶವಾಗಿತ್ತು.

ರಂಗಸಜ್ಜಿಕೆ ರಂಗಕ್ರಿಯೆಗಳಿಗೆ ಅನುಕೂಲವಾಗುತ್ತಿತ್ತು ಮಾತ್ರವಲ್ಲದೆ ದೃಶ್ಯ ಶ್ರೀಮಂತಿಕೆಯನ್ನೂ ಹೊಂದಿತ್ತು. ಮೂಕಜ್ಜಿ ಕನಸುಗಳಲ್ಲಿ ಕಾಣುತ್ತಿದ್ದ ಹೆಚ್ಚಿನ ದೃಶ್ಯಗಳನ್ನೆಲ್ಲಾ ಮೇಲುರಂಗದಲ್ಲಿ ಪ್ರದರ್ಶಿಸಿದ್ದು, ಕಾದಂಬರಿಯಲ್ಲಿ ಸೂಚಿಸಿದ್ದ ಕಾಲವಿನ್ಯಾಸಕ್ಕೆ ಅನುಗುಣವಾಗಿಯೇ ಇತ್ತು. ಕೆಳರಂಗದ ಎಡಬಲ ಮೂಲೆಗಳಲ್ಲಿ

ಮೂಕಜ್ಜಿ ಕುಳಿತಿರುವ ಕಟ್ಟೆ ಮತ್ತು ಸುಬ್ರಾಯನ ಮನೆಯ ಮುಂಭಾಗದ ರಚನೆಗಳಿದ್ದವು. ಇಡೀ ರಂಗಸಜ್ಜಿಕೆ ದೃಶ್ಯತೋಲವನ್ನು ಸೃಷ್ಟಿಸಿತ್ತೆಂದರೆ ತಪ್ಪಾಗಲಾರದು.

ಕಲಾಗಂಗೋತ್ರಿಯ ಈ ಪ್ರದರ್ಶನವು ಒಂದು ಕಾದಂಬರಿಯನ್ನು ಕೆಡಿಸದೆ, ಹೇಗೆ ರಂಗದ ಮೇಲೆ ಪ್ರದರ್ಶಿಸಲು ಸಾಧ್ಯ - ಎಂಬುದರ ಪ್ರಾತ್ಯಕ್ಷಿಕೆಯಾಗಿ ಬಂದಿತ್ತು ಎಂದರೆ ತಪ್ಪಾಗಲಾರದು. ಇದಕ್ಕೆ ನಿರ್ದೇಶಕರ ಶ್ರದ್ಧೆ-ಶಿಸ್ತುಗಳು ಎಷ್ಟು ಕಾರಣವೋ ಅವರಿಗೆ ನೆರವಾಗಿ ನಿಂತ ನಟವರ್ಗ / ನೇಪಥ್ಯ ವರ್ಗದವರೂ ಕಾರಣರಾಗಿರುತ್ತಾರೆ.

ಬರಹದಲ್ಲಿ ರೂಪುಗೊಂಡ ಒಂದು ವ್ಯಕ್ತಿತ್ವವನ್ನು ಅದರೆಲ್ಲಾ ಗುಣಗಳೊಡನೆ ದೃಶ್ಯ ಮಾಧ್ಯಮದಲ್ಲಿ ಹೊಸತನ್ನು ಸೃಷ್ಟಿಸುವುದು ಅತಿ ಕ್ಲಿಷ್ಟ ಕಾರ್ಯವಾದರೂ, ಆ ಪ್ರಯತ್ನದಲ್ಲಿ ಹೊಸತನ್ನು ಸೃಷ್ಟಿಸುವ ತೃಪ್ತಿ ಬರುತ್ತದೆ - ಈ ಬಗೆಯ ತೃಪ್ತಿ ಕಲಾಗಂಗೋತ್ರಿಯ ಎಲ್ಲಾ ಕಲಾವಿದರಿಗೂ ನಾಟಕವನ್ನು ಸಿದ್ಧಗೊಳಿಸುತ್ತಿದ್ದಂತೆ ಖಂಡಿತವಾಗಿಯೂ ದೊರೆತಿರಬಹುದು.

ನಾಟಕದಲ್ಲಿ ಬರುವ ಕೇಂದ್ರ ಪಾತ್ರ ಮೂಕಜ್ಜಿಯದು. ಇದನ್ನು ಸಾಕಷ್ಟು ತರಬೇತಿಗೆ ಒಳಗಾಗಿರುವ ನಟಿಯೊಬ್ಬರು ಅಭಿನಯಿಸಿದ್ದು ಗಮನೀಯ ಅಂಶ. ಅವರ ಮಾತಿನಲ್ಲಿರುವ ನೇರದನಿ, ಏರಿಳಿತಗಳ ಸಾಮಯಿಕ ಉಪಯೋಗ, ಎದೆಯಾಳದಿಂದ ಬರುತ್ತಿದ್ದಂತೆ ಕೇಳಿಸುತ್ತಿದ್ದ ಸ್ವರ-ಇವೆಲ್ಲವೂ ಆ ಪಾತ್ರಕ್ಕೆ ಸ್ವರವೈವಿಧ್ಯ ಆಯಾಮವನ್ನು ಕೊಟ್ಟಿದ್ದವು. ಆದರೆ ಆ ಪಾತ್ರದ ವೇಷಭೂಷಣ ಮಾತ್ರ ಪ್ರಶ್ನಿಸುವಂತಿತ್ತು. ಕಾದಂಬರಿಯಲ್ಲಿ ರೂಪುಗೊಂಡ ಮೂಕಜ್ಜಿ ಅವರಾಗಿರಲಿಲ್ಲ; ಬದಲಾಗಿ ತಲೆಕೂದಲನ್ನು ಹರವಿ, ಕುತ್ತಿಗೆಗೆ ದೊಡ್ಡದೊಂದು ಆಭರಣವನ್ನು ಧರಿಸಿದ ಒಬ್ಬ ಮಾಂತ್ರಿಕಳಂತೆ ಕಾಣಿಸಿಕೊಂಡರೇ ಹೊರತು, ಕಾದಂಬರಿಯ ಪಾತ್ರದಂತಲ್ಲ. ಕಾರಂತರ ಮೂಕಜ್ಜಿ ರಂಗದ ಮೇಲೆ ಕಾಣಿಸಿಕೊಂಡ ಮೂಕಜ್ಜಿ ಆಗಿಗಲಿಲ್ಲ. ಇದಕ್ಕೆ ಕಾರಣ ಮೂಕಜ್ಜಿಯದು ಒಂದು ಸಂಕೀರ್ಣ ವ್ಯಕ್ತಿತ್ವ. ಕಾರಂತರ ಅದು ತವಕದ ಯಾವ ಬರಹಗಳಲ್ಲಿಯೂ ಈ ಬಗೆಯ ಪಾತ್ರ ಬಂದುದು ಎಂದಿಲ್ಲ. ಇದಕ್ಕೆ ಮುಖ್ಯ ಕಾರಣ ಉಳಿದೆಲ್ಲ ಪಾತ್ರಗಳು ಬದುಕಿನಿಂದ ಮೇಲೆದ್ದು ಬಂದವುಗಳು ಎಂದಾಗಿದ್ದರೆ, ಮೂಕಜ್ಜಿ ಅವರ ಕಲ್ಪನೆಯ ಸೃಷ್ಟಿ. ಹಾಗಿರುವಲ್ಲಿ, ಈ ಪಾತ್ರಕ್ಕೆ 'ಆ ಬಗೆಯ ಪ್ರಸಾಧನವನ್ನು ಸೂಚಿಸಿದವರು ಯಾರು? - ನಿರ್ದೇಶಕರೇ ಎಂದಾದರೆ ಅವರ 'ಮನೆ-ಕೆಲಸ' ಸಾಲದು ಎಂದು ಹೇಳಬಹುದು.

ಮೂಕಜ್ಜಿಯ ಮೊಮ್ಮಗ ಸುಬ್ರಾಯನ ವೇಷಭೂಷಣ ಆ ಪಾತ್ರಕ್ಕೆ ತಕ್ಕುದಾಗಿಯೇ ಇತ್ತು. ಮೊಣಕಾಲು ಮೇಲೆ ಬರುವಂತೆ ಅಡ್ಡಮುಂಡವನ್ನು ಎತ್ತಿ ಕಟ್ಟಿಕೊಂಡ ರೀತಿ, ಬಿಳಿಸ

ಹಳ್ಳಿಗತನವನ್ನು ನೇರವಾಗಿ ಪ್ರತಿಬಿಂಬಿಸುತ್ತಿತ್ತು. ಆಗಾಗ ಆತ ಮೂಕಜ್ಜಿಯನ್ನು ಪಶ್ನಿಸುವಲ್ಲಿ ಆತನ ವಿದ್ಯಾವಂತ ಮನಸ್ಸು ಕೆಲಸ ಮಾಡುತ್ತಿತ್ತು. ಅವನಿಗೂ ಕೆಲವೊಮ್ಮೆ ಭ್ರಾಮಕಚಿತ್ರ ಕಾಣಿಸುತ್ತಿದ್ದುದು, ಸ್ವಲ್ಪ ಬಣ್ಣಗೆಟ್ಟಂತೆ ಕಾಣುತಿತ್ತು. (ಇದು ಕಾದಂಬರಿಯಲ್ಲಿಯೇ ಇದೆ)

ಸುಬ್ರಾಯನ ಹೆಂಡತಿ ಸೀತೆಯ ಪಾತ್ರ, ಒಂದು ಹಳ್ಳಿ ಮನೆಯ ಯಜಮಾನತಿಯದು. (ಈಕೆಯನ್ನು ಸುಬ್ರಾಯ ಬಹಳಷ್ಟು ಪ್ರೀತಿಸುತ್ತಾನೆ. ಕಾದಂಬರಿಯಲ್ಲಿ ಸುಬ್ರಾಯ ಆಕೆಯನ್ನು ಯಾವಾಗಲೂ 'ನನ್ನ ಸೀತೆ' ಎಂದೇ ಗುರುತಿಸಿರುವುದು ಈ ನಿರ್ಮಲ ಪ್ರೀತಿಗೆ ಸಾಕ್ಷಿಯಾಗಿದೆ) ಯಾಜಮಾನಿತಿಗೆ ಬೇಕಾದ ದೇಹದ ಕಟ್ಟು, ಸೊಂಟವೇ ಇಲ್ಲದಂತೆ ಕಾಣಿಸುತ್ತಿದ್ದ ನಡು, ಆ ಪಾತ್ರಕ್ಕೆ ಗೌರವ ತಂದುಕೊಟ್ಟಿತ್ತು. ಆ ಪಾತ್ರಧಾರಿ ನಡೆಯ ಸಂಭಾಷಣೆ, ಉಳಿದವರಿಗಿಂತ ಸ್ವಾಭಾವಿಕವಾಗಿತ್ತು. ಆ ನಟಿಯ ನಟನೆ ಸ್ವಾಭಾವಿಕವಾಗಿದ್ದು, ಮೂಕಜ್ಜಿಯ ಕುರಿತಾಗಿ ಅವಳಲ್ಲಿದ್ದ ಆತಂಕ ತುಂಬಿದ ಗೌರವವನ್ನು ಸೂಚಿಸುತಿತ್ತು.

ಇನ್ನೊಂದು ಪಾತ್ರ ನಾಗಿಯದು. ಒಂದು ಕಾಲದಲ್ಲಿ ಬಹಳಷ್ಟು ಸುಂದರಿಯಾಗಿದ್ದ ಆಕೆಯನ್ನು, ಅವಳ ಗಂಡನಿಂದ ಬೇರ್ಪಡಿಸಿ, ಅವಳಿಂದ ಲೈಂಗಿಕ ತೃಷೆಯನ್ನು ಸಾಕಷ್ಟು ತೀರಿಸಿಕೊಂಡ ಬಳಿಕ, ಎರಡು ಮಕ್ಕಳೊಡನೆ ಅವಳನ್ನು ತಿರಸ್ಕರಿಸಿದ ಪ್ರಸಂಗ ಕಾದಂಬರಿಯಲ್ಲಿ ಬರುತ್ತವೆ. ತಿರಸ್ಕೃತನಾಗಿ, ರಂಗದ ಮೇಲೆ ತಿರಸ್ಕೃತ ಸ್ತ್ರೀಯಾಗಿಯೇ ಕಾಣಿಸಿಕೊಂಡಿದ್ದಳು. ಅವಳ ನಟನೆಯಲ್ಲಿ ಮತ್ತು ವೇಷಭೂಷಣದಲ್ಲಿ. ರಂಗದ ಮೇಲೆ ಕೆಲವೇ ಕ್ಷಣ ಇದ್ದು ಒಂದು ದುರಂತ ಬದುಕಿನ ಪ್ರತೀಕವಾಗಿ ಕಾಣಿಸಿಕೊಂಡು, ರಂಗದಿಂದ ನಿರ್ಗಮಿಸಿದ ಆ ಪಾತ್ರ, ಬಹಳ ಕಾಲ ಮನಸ್ಸಿನಲ್ಲಿ ಉಳಿಯುವಂತಾಗಿತ್ತು.

ಮಂಜುನಾಥ ಪಾತ್ರದ ದರ್ಪ, ಆ ಪಾತ್ರಧಾರಿ ಧರಿಸಿಕೊಂಡು ಬಂದಿದ್ದ ಸಕಲಾತಿಯಿಂದಲೇ ಸ್ಪಷ್ಟಗೊಂಡಿತ್ತು. ಜನ್ನನ ಪಾತ್ರ ಗಂಡು-ಹೆಣ್ಣಿನೊಳಗಿನ ಸಂಬಂಧಗಳ ಕುರಿತ ವಿಶ್ಲೇಷಣೆಗೆಂದೇ ಸ್ಪಷ್ಟಗೊಂಡಂತಿತ್ತು.

ನಟವರ್ಗ ಎಲ್ಲಿಯೂ ಅತಿಯಾಗಿ ನಟಿಸಿದ್ದಿಲ್ಲ. ಶೈಲೀಕೃತ ನಟನೆಗೆ ಮಾರುಹೋಗಿಲ್ಲ - ಎಂಬುದು ಕಾದಂಬರಿಯ ಧ್ವನಿಗೆ ಪೂರಕವಾಗಿತ್ತು.

ನಾಟಕ ಪ್ರಾರಂಭಗೊಳ್ಳುವ ಮೊದಲು ಮತ್ತು ನಾಟಕ ಅಂತ್ಯವಾದ ಬಳಿಕ ಮೂಕಜ್ಜಿಯ ಕುರಿತಾದ ಒಂದು ಹಾಡು ಚೆನ್ನಾಗಿತ್ತು - ಹಾಡಿನ ರಾಗಸಂಯೋಜನೆ ಪರಿಣಾಮಕಾರಿಯಾಗಿತ್ತು. ತಿಪ್ಪಜ್ಜಿಯ ಮರಣಾಂತಿಕ ದೃಶ್ಯಕ್ಕೆ ಹಿನ್ನೆಲೆಯಾಗಿ ಕೊಟ್ಟಿದ್ದ ಬಾನ್ಸುರಿಯ ನಾದವಿನ್ಯಾಸ ಹೃದಯವೇಧಿಯಾಗಿತ್ತು.

ಲೈಂಗಿಕತೆಗೆ ಸಂಬಂಧಿಸಿದಂತೆ ಕಾದಂಬರಿಯಲ್ಲಿ ಬಂದಿದ್ದ ಕೆಲವು ದೃಶ್ಯಗಳನ್ನು ಕೈಬಿಟ್ಟಿದ್ದರೂ, ಅದೇನು ದೊಡ್ಡ ದೋಷ ಎಂದು ಕಾಣಿಸಲಿಲ್ಲ.

ಕಾರಂತರು ತಮ್ಮ ಮೂವತ್ತನೆಯ ವಯಸ್ಸಿನಲ್ಲಿ ಬರೆದಿದ್ದ 'ಬಾಳ್ವೆಯೆ ಬೆಳಕು' ಎಂಬ ಗಂಭೀರ ಬರಹದ ಕಾದಂಬರಿ ರೂಪವಾಗಿ 'ಮೂಕಜ್ಜಿಯ ಕನಸುಗಳು' ಬಂದಿದ್ದರೆ, ಆ ಕಾದಂಬರಿಯ ನೆರಳಚ್ಚು ರೂಪವಾಗಿ ಈ ನಾಟಕ ಬಂದಿರುವುದು ಸಂತೋಷಕರ ವಿಚಾರ.

ಕಾರಂತರ ಒಳ-ಹೊರಗನ್ನು ಚಿತ್ರಿಸುವ ಮೂಕಜ್ಜಿ ಮತ್ತು ಸುಬ್ರಾಯರ ಪಾತ್ರಗಳನ್ನು, ಅವೆರಡಕ್ಕೆ ಪ್ರೇರಕವಾಗಿ ಬಂದ ಇನ್ನುಳಿದ ಪಾತ್ರಗಳನ್ನು ನಾಟಕದ ಮೂಲಕ ನಿಬ್ಬೆರಗಾಗಿ ನೋಡಿದ ಪ್ರೇಕ್ಷಕರ ಅನುಭಾವ, ಪ್ರದರ್ಶನದ ಯಶಸ್ಸಿಗೆ ಸಾಕ್ಷಿಯಾಗಿದೆ - ಇದಕ್ಕಾಗಿ ಕಲಾಗಂಗೋತ್ರಿಗೆ ಪ್ರೇಕ್ಷಕರಿಂದ ಮನ್ನಣೆ ದೊರಕಿತು. ●

# ಸುಬ್ಬತ್ತೆಯ ಪರಿವಾರ

- ಪ್ರೇಮಾಭಟ್

ಸುಬ್ಬತ್ತೆಗೆ ಸಾಲಾಗಿ ಆರು ಮಕ್ಕಳು. 'ಈ ಕಾಲದಲ್ಲಿ ಇಷ್ಟೊಂದು ಮಕ್ಕಳನ್ನು ಏಕೆ ಹೆತ್ತೆ' ಎಂದು ನಾವು ಕೇಳುವ ಹಾಗಿಲ್ಲ. ಅವಳ ಉದ್ದ ನಾಲಿಗೆ ಸಹಸ್ರ ನಾಮಾರ್ಚನೆಗೆ ಪ್ರಾರಂಭಿಸಿಬಿಟ್ಟರೆ. ಅಲ್ಲಿ ನಿಲ್ಲುವಂತಿಲ್ಲ. ಮತ್ತೆ ಯಾವ ಬೋರ್ಡು ಅವಳ ಮನೋನಿರ್ಧಾರವನ್ನು ಬದಲಾಯಿಸಿದ ಹಾಗೆ ಕಾಣಲಿಲ್ಲ. ಅವಳು ಮನೆಗೆ ಬಂದರೆ ಕಿಟ್ಟಿ ಬೇಕೆಂದು ರೇಡಿಯೋವನ್ನು ಜೋರಾಗಿ ಟ್ಯೂನ್ ಮಾಡುತ್ತಾನೆ. 'ಎರಡು ಬೇಕು - ಮೂರು ಸಾಕು' ಎನ್ನುವ ಶಬ್ದ ಕಿವಿಗೆ ಬಿದ್ದರೂ ಸುಬ್ಬತ್ತೆ ನೆಟ್ಟಗೆ ಕುಳಿತೇ ಇರುತ್ತಾಳೆ. ಸುಬ್ಬತ್ತೆಗೆ ನಾವಿಬ್ಬರು ನಮಗೆ ಇಬ್ಬರೆ ಮಕ್ಕಳು ಎನ್ನುವುದು ಹೋಗಿ ನಾವಿಬ್ಬರು ನಮಗೆ ಬರೇ ಮಕ್ಕಳು ಎಂದು ತುಂಟರು ಟೀಕಿಸಿರಬೇಕು. ಆದರೂ ಸುಬ್ಬತ್ತೆ ಧೈರ್ಯವಾಗಿ ಫಲಕವನ್ನು ನೋಡುತ್ತಿರುತ್ತಾಳೆ. ಗಂಡ ಮೂರು ಹೊತ್ತು ಬೀಡಿ ಸೇದುತ್ತ ಕಾಲಹರಣ ಮಾಡುತ್ತಾನೆ. ಇವಳು ವರ್ಷ ವರ್ಷ ಹಡೆಯುತ್ತಾಳೆ. ಕೋದಂಡನಿಗೆ ಕೆಲಸ ಮಾಡಲು ಮೈ ಬಗ್ಗದಿದ್ದರೂ ಮಕ್ಕಳೆಂದರೆ ಬಹಳ ಇಷ್ಟ. ಅವನ ಆಸೆಗೆ ಚಕಾರವೆತ್ತದೆ ಸುಬ್ಬತ್ತೆ ಸಂಸಾರ ಮಾಡುತ್ತಾಳೆ. ಈ ಒಂದು ವಿಚಾರದಲ್ಲಿ ಪಾಪ ಸುಬ್ಬತ್ತೆ ಬಹಳ ಆದರ್ಶದ ಹೆಂಗಸು? ಸುಬ್ಬತ್ತೆ ವರ್ಷಕ್ಕೆ ನಾಲ್ಕು ಸಾರಿ ನಮ್ಮ ಮನೆಗೆ ಬರುವುದುಂಟು. ಊರ ತೇರಿಗೆ ಬಂದರೆ ಒಂದು ತಿಂಗಳು ಠಿಕಾಣಿ. ಹಬ್ಬಹರಿದಿನಗಳಲ್ಲಿ ಬಂದರೆ ಹತ್ತಿಪ್ಪತ್ತು ದಿವಸ ಇದ್ದು ಹೋಗುತ್ತಾಳೆ. ಬಾ ಎಂದು ಕರೆಯಬೇಕಾಗಿಲ್ಲ. ಹೋಗು ಎಂದು ಹೇಳಬೇಕಾಗಿಲ್ಲ. ನಾಚಿಕೆ, ದಾಕ್ಷಿಣ್ಯ, ಸಂಕೋಚ ಸುಬ್ಬತ್ತೆ ಕಲಿತಿಲ್ಲ. ಅಣ್ಣನ ಮನೆಯಲ್ಲಿವೇ ದಾಕ್ಷಿಣ್ಯ ಮಾಡಲಿಕ್ಕೆ ಎನ್ನುತ್ತಾಳೆ. ಏನು ಕೊಟ್ಟರೂ ಬೇಡ ಎನ್ನುವುದಿಲ್ಲ, ಬಂದದ್ದು ಬರಲಿ ಎನ್ನುತ್ತಾಳೆ. ಮಕ್ಕಳು ಹೆಚ್ಚು ಎಂದು ಆಗ ಮಾತ್ರ ಅವಳ ಬಾಯಿಂದ ಬರುತ್ತದೆ. ಏನಾದರೂ ಸಹಾಯ ಮಾಡು ಎನ್ನುತ್ತಾಳೆ. ಅಣ್ಣ ಕೊಟ್ಟದ್ದನ್ನು ಸಂತೋಷದಿಂದ ತೆಗೆದುಕೊಂಡು ಹೋಗುತ್ತಾಳೆ. ಅಣ್ಣ ಕೊಡದೆ ಇದ್ದರೆ ಅತ್ತಿಗೆಯನ್ನು ಬೈಯುತ್ತಾಳೆ. ಊರಿಗೆಲ್ಲಾ ಹೇಳಿಕೊಂಡು ಬರುತ್ತಾಳೆ. 'ಅಣ್ಣನಿಗೆ ಕೊಡಲಿಕ್ಕೆ ಮನಸ್ಸುಂಟು, ಅತ್ತಿಗೆ ಬಿಡುವುದಿಲ್ಲ' ಎನ್ನುತ್ತಾಳೆ. ಸುಬ್ಬತ್ತೆಗೆ ಕೊಟ್ಟಷ್ಟು ತೃಪ್ತಿ ಇಲ್ಲ. ಅಣ್ಣ ಚೆನ್ನಾಗಿದ್ದಾನೆ ಎಂದು ಹೊಟ್ಟೆ ಉರಿ!! ಅವನದು ಸಣ್ಣ ಸಂಸಾರ ಎಂದು

ತಿಳಿಯುವುದಿಲ್ಲ. ಕಷ್ಟಪಡುತ್ತಾನೆ ಸುಖವಾಗಿದ್ದಾರೆ ಎಂದು ಸುಬ್ಬತ್ತೆ ಯೋಚಿಸುವುದಿಲ್ಲ. ಮುಖ್ಯ ತನಗೂ ತನ್ನ ಮಕ್ಕಳಿಗೂ ಕೊಡಬೇಕು. ಆಗ ಅಣ್ಣ ಒಳ್ಳೆಯವ. ಇಲ್ಲದಿದ್ದರೆ ಅತ್ತಿಗೆ ಕೆಟ್ಟವಳು. ಅವಳ ಪರಿವಾರಕ್ಕೆ ತಿನ್ನಲಿಕ್ಕೆ ಒಂದು ಖಂಡುಗ ಬೇಕು. ಮನೆಗೆ ಬಂದಾಗ ಅಣ್ಣನ ಮಗ ಕಿಟ್ಟಿ ಹೆಚ್ಚಿಗೆ ತಿಂದರೆ ಅವಳಿಗೆ ಸಂಕಟ ತಡೆಯಲಿಕ್ಕೆ ಸಾಧ್ಯವಾಗುವುದಿಲ್ಲ. ತನ್ನ ಮಕ್ಕಳು ತಿನ್ನುವುದು ಎಷ್ಟೆಂದು ಅವಳು ಯೋಚಿಸುವುದಿಲ್ಲ. ಸುಬ್ಬತ್ತೆಯ ವಿಚಾರವೇ ಹೀಗೆ. ಕಿಟ್ಟಿಗೆ ಮಾತ್ರ ಸುಬ್ಬತ್ತೆಯನ್ನು ಕಂಡರೆ ಆಗುತ್ತಿರಲಿಲ್ಲ. ಅವಳ ಪರಿವಾರ ಊರಿಗೆ ಬಂದರೆ ಅಮ್ಮನಿಗೆ ಅಡಿಗೆ ಮನೆ ಬಿಟ್ಟು ಹೊರಬರಲು ಆಗುತ್ತಿರಲಿಲ್ಲ. ಆಗ ಸುಬ್ಬತ್ತೆಯ ಮಕ್ಕಳ ಗೌಜಿ ನೋಡಬೇಕು. ಮನೆಯನ್ನು ಲೂಟಿ ಮಾಡಿಟ್ಟಿರುತ್ತಾರೆ. ಸಣ್ಣ ಮಕ್ಕಳು ಅಂಗಳದಲ್ಲೇ ಹೊಲಸು ಮಾಡಿಬಿಡುತ್ತಾರೆ. ಸುಬ್ಬತ್ತೆ ಸರಿಯಾಗಿ ಹೊಲಸನ್ನು ತೆಗೆಯುವುದಿಲ್ಲ. ಅವಳು ಹೋಗುವವರೆಗೆ ಮನೆಯಲ್ಲಿ ಸ್ವಚ್ಛತೆ ಇರುವುದು ಕಡಿಮೆ. ನಯ ನಾಜೋಕು ಸುಬ್ಬತ್ತೆಗೆ ಮೊದಲೇ ತಿಳಿಯದು. ಇನ್ನು ಅವಳ ಮಕ್ಕಳಿಗೆ ಎಲ್ಲಿಂದ ಬರಬೇಕು? ಕಿಟ್ಟಿಗೆ ಆ ಮಕ್ಕಳ ಕೈಕಾಯುವುದೇ ಕೆಲಸ. ಸ್ವಲ್ಪ ಅಲಕ್ಷ್ಯವಾದರೂ ಸರಿ, ರೇಡಿಯೋದ ಬ್ಯಾಂಡನ್ನು ಕಳಚಿಟ್ಟಿರುತ್ತಾನೆ ಪುಟ್ಟು. ಟೇಬಲ್ ಲ್ಯಾಂಪ್ ಒಡೆದು ಸಹಸ್ರ ಹೋಳಾಗಿರುತ್ತದೆ. ತೇಜುವಿನ ಗೊಂಬೆಯನ್ನು ಬೀದಿಗೆಸೆದಿರುತ್ತಾಳೆ ರಾಧ. ಯಾಕೆ ಅವನ್ನೆಲ್ಲ ಮುಟ್ಟುತ್ತೀರಿ? ಎಂದು ಸುಬ್ಬತ್ತೆ ಕೇಳುತ್ತಿರಲಿಲ್ಲ. ಮಕ್ಕಳು ಮಂಗಚೇಷ್ಟೆ ಮಾಡಿದರೂ ಸುಮ್ಮನಿರುತ್ತಾಳೆ. ತನ್ನಣ್ಣನ ಮನೆಯಲ್ಲಿ ತನ್ನ ಮಕ್ಕಳಿಗೆ ಇದನ್ನೆಲ್ಲಾ ಮಾಡುವ ಸ್ವಾತಂತ್ರ್ಯವಿದೆ ಎಂದು ಅಂದುಕೊಂಡಿರಬೇಕು ಅವಳು. ಸುಬ್ಬತ್ತೆ ಬಂದು ಹೋದರೆ ನಾಲ್ಕು ತಿಂಗಳು ಬೇಕು ಅಮ್ಮನಿಗೆ ಸುಧಾರಿಸಿಕೊಳ್ಳಲು. ಸುಬ್ಬತ್ತೆ ಅಷ್ಟರಲ್ಲಿ ಮತ್ತೆ ಬರುವ ದಿನ ಸಮೀಪಿಸುತ್ತಿತ್ತು. ಒಟ್ಟಾರೆ ಅವಳ ಪರಿವಾರದಿಂದ ಕಷ್ಟ ಯಾವತ್ತಿಗೂ ತಪ್ಪಿದ್ದಲ್ಲ. ಹೇಳಿದರೆ ಹೆಚ್ಚಾಗಿ ತೆಗೆದುಕೊಂಡು ಬಿಡುತ್ತಾಳೆ ಸುಬ್ಬತ್ತೆ.

ಒಂದು ದಿನ ಸುಬ್ಬತ್ತೆ ತನ್ನ ಅಣ್ಣನ ಹತ್ತಿರ ಹೇಳುತ್ತಿದ್ದಳು. 'ಹೇಗಾದರೂ ಮಾಡಿ ಕಿಟ್ಟಿಯನ್ನು ಒಪ್ಪಿಸು ಅಣ್ಣ. ಅವನು ಮಲ್ಲಿಯನ್ನು ಮದುವೆಯಾಗಿ ಬಿಟ್ಟರೆ ತಲೆ ಮೇಲಿದ್ದ ಅರ್ಧ ಭಾರ ಕಡಿಮೆಯಾಗುತ್ತದೆ. ನಾನು ಸಲೀಸಾಗಿ ಬಂದು ಹೋಗುತ್ತಿರಬಹುದು' ಎಂದು.

ಕಿಟ್ಟಿ ತಟ್ಟನೆ ಉತ್ತರ ಕೊಟ್ಟ, ಅವನಿಗೆ ಯಾತರ ಮುಲಾಜು? 'ಸುಬ್ಬತ್ತೆ . . . ಮದುವೆಯಾಗುವವನು ನಾನು, ಅಪ್ಪನನ್ನು ಏನು ಕೇಳುತ್ತೀರಿ? ನನ್ನನ್ನು ಕೇಳು ಸುಬ್ಬತ್ತೆ. ನಿಮ್ಮ ಮಲ್ಲಿಯನ್ನು ಕಟ್ಟಿಕೊಂಡರೆ ಆಯಿತು ಕತೆ. ಈಗಲೇ ನಿಮ್ಮ ಪರಿವಾರ ಹೊತ್ತು ಸಾಕಾಗಿದೆ. ನಾಳೆ ಮಲ್ಲಿಗೂ ನಿಮಗಾದಂತೆ ಮಕ್ಕಳು ಹುಟ್ಟಿಬಿಟ್ಟರೆ ಮುಗಿಯಿತು ಕತೆ. ನೀವೆಲ್ಲ ಜಿಗಣೆಯಂತೆ ಪರರನ್ನು ಆಶ್ರಯಿಸುವವರು. ನನಗೆ ಬೇಡಪ್ಪ ನಿಮ್ಮ

ಮಲ್ಲಿ' ಎಂದುಬಿಟ್ಟ. ಸುಬ್ಬತ್ತೆ ಅಣ್ಣನ ಮುಖ ನೋಡಿದಳು. ಏಕೋ ಅಣ್ಣ ಏನೂ ಹೇಳಲಿಲ್ಲ? ಸುಬ್ಬತ್ತೆ ಸಾವಿರ ಬೈಯುತ್ತಾ ತನ್ನ ಪರಿವಾರದೊಂದಿಗೆ ಹೋದದ್ದನ್ನು ನೋಡಿ ಕಿಟ್ಟ ನಗುತ್ತ ಒಳಗೆ ಬಂದ. ಸುಬ್ಬತ್ತೆಗೆ ನಾಚಿಕೆ ಸ್ವಲ್ಪ ಕಡಿಮೆ. ಸಿಟ್ಟು ಇಳಿದ ಮೇಲೆ ಮತ್ತೆ ಊರ ತೇರಿಗೆ ಅವಳು ಬಂದಿದ್ದಳು. ಕಿಟ್ಟಿಯನ್ನು ಒಪ್ಪಿಸಲು ಮತ್ತೆ ಹವಣಿಸಿದ್ದಳು. ಮಲ್ಲಿ ಪುಟ್ಟ ಸುಬ್ಬತ್ತೆಯಂತೆ ಕಾಣುತ್ತಿದ್ದಳು. ತದ್ರೂಪ, ಆಚಾರ ವಿಚಾರ ಎಲ್ಲ ಅವಳ ಹಾಗೆ ಇರಬಹುದು ಎಂದು ಕೊಂಡ ಕಿಟ್ಟ ಸುಬ್ಬತ್ತೆಗೆ ನೇರವಾಗಿ 'ಮಲ್ಲಿಯ ಮದುವೆಗೆ ಏನಾದರೂ ಸಹಾಯ ಮಾಡೋಣ. ನನಗೆ ಮಾತ್ರ ಅವಳನ್ನು ಕಟ್ಟಬೇಡಿ. ಹೆಚ್ಚು ಮಕ್ಕಳ ಆಸೆ ನನಗೆ ಇಲ್ಲ' ಎಂದು ಬಿಟ್ಟ. ಸುಬ್ಬತ್ತೆ ಒಂದು ಕ್ಷಣ ಪೆಚ್ಚಾಗಿಬಿಟ್ಟಳು. ಮತ್ತೆ ಕಿಟ್ಟಿಯನ್ನು ಬೈಯುತ್ತ 'ಮಕ್ಕಳು ಹುಟ್ಟುವುದಕ್ಕೂ ಪುಣ್ಯ ಮಾಡಿರಬೇಕು. ನಿನಗೇನು ಗೊತ್ತು' ಎನ್ನುತ್ತ ಹೋದಳು. ಯಾರ ಮಾತಿಗೂ ಜಗ್ಗುವುದಿಲ್ಲ, ಯಾರಿಗೂ ಸೋಲುವುದಿಲ್ಲ ಸುಬ್ಬತ್ತೆ. ಅವಳ ಪರಿವಾರವನ್ನು ನೋಡುತ್ತ ನಿಟ್ಟುಸಿರುಬಿಟ್ಟ ಕಿಟ್ಟಿ. ಒಂದಕ್ಕಿಂತ ಒಂದು ಸರಪೇತಲ ಪೀಕಲಾಂಡಿಗಳು. ಕಾಯಿಲೆ ಕಸಾಲೆ ರೋಗ ರುಜಿನ ತಪ್ಪಿದ್ದಲ್ಲ. ಸುಬ್ಬತ್ತೆ ಯಾರನ್ನು ಎಷ್ಟು ನೋಡಿಕೊಂಡಾಳು ? ಕಳೆದ ಬಾರಿಗೆ ತೇರಿಗೆ ಬಂದಾಗ ಮತ್ತೆ ಬಸುರಿ.

ತಾನು ಬರೆದ ಕವನವೇ ಕವನ, ಅದನ್ನು ಎಲ್ಲರೂ ಓದಬೇಕು, ಮೆಚ್ಚಲೂ ಬೇಕು ಎಂದು ಸುಗ್ರೀವಾಜ್ಞೆ ಹೊರಡಿಸುವ ಅಧಿಕಾರ ಯಾವ ಕವಿಗೂ ಇಲ್ಲ. ಹಾಗೆಯೇ ನೀನು ಹೀಗೇ ಇರಬೇಕು, ಇಂಥ ವಿಷಯಗಳ ಮೇಲೆ, ಹೀಗೇ ಬರೆಯಬೇಕು ಎನ್ನುವ ಸರ್ವಾಧಿಕಾರ ವಾಚಕನಿಗಾಗಲೀ, ವಿಮರ್ಶಕನಿಗಾಗಲೀ ಇಲ್ಲ. ಜಾತಿ, ಮತ, ದೇಶ, ಕಾಲ, ಸಿದ್ಧಾಂತಗಳನ್ನು ಮೀರಿದ ಅಥವಾ ಅವುಗಳ ತಳದಲ್ಲಿರುವ ಮೂಲಭೂತ ಮಾನವತ್ವದ ತಿರುಳೇ ಕಾವ್ಯವಸ್ತು. ಕಾರ್ಯಕಾರಣಗಳ ತರ್ಕಪ್ರಪಂಚದಾಚೆಗಿನ ಯಾವುದೋ ಅಂತಃಸ್ಫುರಣ ಸಾರ್ಥಕ ಕಾವ್ಯರಚನೆಯಲ್ಲಿ ಮಾನವಾತೀತ ಎನ್ನುವ ಹಾಗೆ ಕೆಲಸ ಮಾಡುತ್ತದೆ. ಆ ಅಂತನಿರ್ದೇಶನವೊಂದಕ್ಕೆ ಮಾತ್ರವೇ ಕವಿ ಬದ್ಧ. ಇನ್ನು ಯಾವುದಕ್ಕೂ ಅಲ್ಲ.

-ಗೋಪಾಲಕೃಷ್ಣ ಅಡಿಗ

# ಆಧುನಿಕ ಮಹಾಕಾವ್ಯಗಳಲ್ಲಿ ಅಧ್ಯಾತ್ಮ

- ಡಾ|| ಕಬ್ಬಿನಾಲೆ ವಸನ್ತ ಭಾರದ್ವಾಜ

ಮಹಾಕಾವ್ಯಗಳು ಸಾರಸ್ವತ ಪ್ರಪಂಚದ ಮಹಾಸಿದ್ಧಿ ಎಂಬುದರಲ್ಲಿ ಎರಡು ಮಾತಿಲ್ಲ. ಮಹತ್ತಾದುದಕ್ಕೆ ಕಾಲದ ಕಟ್ಟಿಲ್ಲವೆಂಬುದಂತೂ ಸತ್ಯ. ಒಂದು ಸಮಗ್ರ ದೇಶವು ಅಥವಾ ಕಾಲವು ತನ್ನ ಹೃದಯವನ್ನು ವ್ಯಕ್ತಪಡಿಸುವ ಮೂಲಕ ಶಾಶ್ವತವೆನಿಸುವ ಕಾವ್ಯವಸ್ತು ನೀಡಿದಾಗ ಅದನ್ನು ಮಹಾಕಾವ್ಯವೆಂದು ಕರೆಯಬಹುದು. ಟಿ.ಎಸ್. ಎಲಿಯೆಟ್ ಹೇಳುವಂತೆ ಒಂದು ನಾಗರಿಕತೆ ಪರಿಪಕ್ವವಾದಾಗ, ಒಂದು ಭಾಷೆ ಮತ್ತು ಸಾಹಿತ್ಯ ಪರಿಪಕ್ವವಾದಾಗ ಮಾತ್ರ ಒಂದು ಮಹಾಕಾವ್ಯ ಘಟಿಸಬಲ್ಲುದು. ಈ ಪರಿಪಕ್ವತೆಯೆಂಬುದು ಜೀವನದ ಅಂತರಂಗದರ್ಶನವೇಂಬುದರಲ್ಲಿ ಸಂದೇಹವಿಲ್ಲ. ಈ ಅಂತರಂಗದರ್ಶನವೇ ನಿಜವಾದ ಅಧ್ಯಾತ್ಮಾನುಭೂತಿಯೆಂದು ಬೇರೆ ಹೇಳಬೇಕಾಗಿಲ್ಲ. ಮಹಾಕಾವ್ಯಗಳ ಕಥೆ ಹಳೆಯದಾದರೂ, ಹೊಸಯುಗಧರ್ಮವನ್ನು ಮೈಗೂಡಿಸಿ ಕೊಂಡು ವಿನೂತನವಾಗಲು ಸಾಧ್ಯವೆಂಬುದು ಕನ್ನಡದ ಮಟ್ಟಿಗಂತೂ ನೂರಕ್ಕೆ ನೂರು ಸತ್ಯ. ಸಾರಭರಿತ ಪ್ರಾಚೀನ ಪರಂಪರೆಯ ಶಾಶ್ವತ ಮೌಲ್ಯಗಳನ್ನು ಎಷ್ಟರಮಟ್ಟಿಗೆ ಒಂದು ಶ್ರೇಷ್ಠ ಕಾವ್ಯ ಹೃದ್ಗತ ಮಾಡಿಕೊಂಡಿದೆ ಎಂಬುದರಲ್ಲೇ ಕಾವ್ಯದ ಮಹತ್ತ್ವ ಅರಿವಾಗಬಲ್ಲುದು. ಈ ಪರಂಪರೆಯ ಚಿರಾಂಶಗಳು ಹೇಗೆ ಸಮಕಾಲೀನ ಬದುಕಿಗೆ ಕೈಬೆಳಕಾಗುತ್ತದೆ ಮತ್ತು ಭವಿತವ್ಯವನ್ನು ಕಾಣಲು ಹೇಗೆ ಸಹಕಾರಿಯಾಗುತ್ತವೆ ಎಂಬ ಹಿನ್ನೆಲೆಯಲ್ಲಿಯೇ ಕಾವ್ಯದ ಆತ್ಯಂತಿಕ ಪ್ರಯೋಜನವಿದೆ. ನಮ್ಮ ಆಧುನಿಕ ಕಾಲದ ಮಹಾಕಾವ್ಯಗಳು ಈ ದಿಸೆಯಲ್ಲಿ ಅತ್ಯಂತ ಮೌಲಿಕವಾದ ರಚನೆಗಳೆಂಬುದರಲ್ಲಿ ಅನುಮಾನವಿಲ್ಲ.

ಮಹಾಕವಿ ಕುವೆಂಪು ಅವರು ಸಾಹಿತ್ಯದ ಎಲ್ಲ ಪ್ರಕಾರಗಳಲ್ಲೂ ಕೃಷಿ ಮಾಡಿದವರು. ಕವಿತೆ, ಖಂಡಕಾವ್ಯ, ನಾಟಕ, ಕಾದಂಬರಿ, ಕಾವ್ಯಮೀಮಾಂಸೆ ಎಲ್ಲದರಲ್ಲೂ ಉತ್ಕೃಷ್ಟತೆಯನ್ನು ಸಾಧಿಸಿದವರು. ಆದರೂ ಅವರನ್ನು ಯಾವುದೋ ಅಸಂತೃಪ್ತಿ ಕಾಡಿತು. ಆ ಕಾರಣದಿಂದಲೇ ಮಹಾಕಾವ್ಯ ರಚನೆಯ ಕಡೆಗೆ ಅವರು ಆಲೋಚಿಸಿದರು.

ಜೀವನದ ಎಲ್ಲ ನೋವು-ನಲಿವುಗಳನ್ನು ಕಂಡ ಮೇಲೆ ಅಧ್ಯಾತ್ಮಕ್ಕೆ ಮನಸೋಲುವುದು ಮಾನವ ಸಹಜ ಸ್ವಭಾವ. ಅಧ್ಯಾತ್ಮದ ಆನಂದಾನುಭೂತಿಗೆ ವಿಸ್ತಾರವಾದ ಅವಕಾಶ ದೊರೆಯುವುದು ಮಹಾಕಾವ್ಯದಲ್ಲಿ ಮಾತ್ರ. ಸಾಧ್ಯವಾದುದರಿಂದ ನಮ್ಮ ಮಹಾಕವಿಗಳಿಗೆ ಮಹಾಕಾವ್ಯ ನಿರ್ಮಿತಿಯು ಅಗತ್ಯವೆನಿಸಿರಬೇಕು. ಮಹಾಕಾವ್ಯದ ಉದ್ದೇಶ ಮತ್ತು ಪರಿಣಾಮಗಳೆರಡೂ ಮಹತ್ತಾದುದೆ. ಅದು ನೀಡುವ ಸುಖ ಕ್ಷಣಿಕವಾದುದಲ್ಲ. ಮಹಾಕಾವ್ಯದ ಅನುಸಂಧಾನ ಕೇವಲ ಕಿರುದೋಣಿಯ ಪ್ರಯಾಣಸೌಖ್ಯವಲ್ಲ. ಅನಂತಾಕಾಶದ ವೈನತೇಯ ವಿಹಾರ! ವಿಯದ್ಗಂಗಾ ಸ್ನಾನ; ಬ್ರಹ್ಮಾನಂದ ಪಾನ!

## ಶ್ರೀರಾಮಾಯಣ ದರ್ಶನಂ

ತಮಿಳುನಾಡಿನಲ್ಲಿ ದ್ರಾವಿಡ ಚಳವಳಿ ಪರಾಕಾಷ್ಠೆಗೇರಿದ ಕಾಲವದು. ಅಲ್ಲಿಯ ಬೀದಿಗಳಲ್ಲಿ ರಾಮದೇವರ ಭಾವಚಿತ್ರಕ್ಕೆ ಚಪ್ಪಲಿಹಾರ ಹಾಕಿ ಪೊರಕೆಯಲ್ಲಿ ಹೊಡೆದು ಮೆರವಣಿಗೆ ನಡೆಯುತ್ತಿದ್ದ ಕಾಲದಲ್ಲಿ ಕರ್ನಾಟಕದಲ್ಲಿ ರಾಮಾಯಣದರ್ಶನಂ ಕಾವ್ಯದ ಗಮಕವಾಚನ ನಡೆಯುತ್ತಿತ್ತು! ಕನ್ನಡ ಮನಸ್ಸುಗಳ ಸಂಸ್ಕಾರಶುದ್ಧಿಯನ್ನು ತೋರಿಸಲು ಈ ಉದಾಹರಣೆ ಸಾಕಲ್ಲವೆ? ಕರ್ನಾಟಕದ ಜನಮನಕ್ಕೆ ಅಧ್ಯಾತ್ಮದ ಪರಿಶುದ್ಧ ಸ್ವರೂಪ ತೋರಿಸುವ ಕೆಲಸವನ್ನು ಮಹಾಕಾವ್ಯ ಮಾಡಿತೆಂಬುದು ಇದರಿಂದ ವೇದ್ಯವಾಗುತ್ತದೆ. ಕುವೆಂಪು ಅವರೇ ಹೇಳುವಂತೆ 'ಬಹಿರ್ಘಟನೆಯುಂ ಪ್ರತಿಕೃತಿಸುವಾ ಲೌಕಿಕ ಚರಿತ್ರೆಯಲ್ತಿದು, ಅಲೌಕಿಕ ನಿತ್ಯಸತ್ಯಂಗಳಂ ಪ್ರತಿಮಿಸುವ ಸತ್ಯಸ್ಯ ಸತ್ಯ ಕಥನಂ ಕಣಾ'. ರಾಮಾಯಣ ದರ್ಶನದಲ್ಲಿ ಅಲೌಕಿಕ ಅನುಭವದ ವಿವೇಚನೆ ಮುಖ್ಯವಾಗುತ್ತದೆ. ಅದು ಇತಿಹಾಸವಲ್ಲ, ಬರಿಕಥೆಯಲ್ಲ. 'ಕಥೆ ತಾಂ ನಿಮಿತ್ತ ಮಾತ್ರಂ, ಆತ್ಮಕೆ ಶರೀರದೊಲಂತೆ. ಮೆಯ್ವೆತ್ತುದಿಲ್ಲಿ ರಾಮನ ಕಥೆಯ ಪಂಜರದಿ ರಾಮರೂಪದ ಪರಾತ್ಪರದ ಪುರುಷೋತ್ತಮನ ಲೋಕಲೀಲಾದರ್ಶನಂ' ಎಂಬ ಮಹಾಕವಿವಾಣಿ ಮನನ ಯೋಗ್ಯವಾದುದು.

ಕಾವ್ಯದ ಹೆಸರೇ ಹೇಳುವಂತೆ ಅದು 'ದರ್ಶನ ಕಾವ್ಯ' ಆ ಕಾಣ್ಕೆಯನ್ನು ನಾವು ಅನುಸಂಧಾನ ಮಾಡಿಕೊಂಡಾಗಲೇ ಅದರ ಅನುಭವ ಸಾಧ್ಯ. 'ನೆಯ್ದಪಳಂತೆ ಜಗವನೊಂದತಿ ವಿರಾಣ್ ಮನಂ ಸೂಕ್ಷ್ಮಾತಿಸೂಕ್ಷ್ಮ ತಂತ್ರದಿ ಬಿಗಿದು ಕಟ್ಟಿಯುಂ, ಜೀವಿಗಳ್ಗಿಚ್ಛೆಯಾ ಸ್ವಾತಂತ್ರ್ಯಭಾವಮಂ ನೀಡಿ' - ಎಂಬ ದಾರ್ಶನಿಕವಾಣಿಯ ಪ್ರತಿಯೊಂದು ಪದವು ಪುಟಗಟ್ಟಲೆ ವಿವರಣೆಯನ್ನು ಅಪೇಕ್ಷಿಸುತ್ತದೆ. ಜೀವಿಯನ್ನು ಬಿಗಿದು ಕಟ್ಟಿದರೂ ಇಚ್ಛಾ ಸ್ವಾತಂತ್ರ್ಯ ನೀಡುವ ವಿರಾಣ್ಮನದ ಸೂಕ್ಷ್ಮಾತಿಸೂಕ್ಷ್ಮ ತಂತ್ರದ 'ನೆಯ್ಗಾರಿಕೆ' ಅಧ್ಯಾತ್ಮದ ಅಂತರಂಗವನ್ನು ಅನಾವರಣ ಮಾಡುವಂತಹುದು

ಇದನ್ನೇ 'ಆತ್ಮದರ್ಶನಕೇರ್ದ ರಸ ಸಮಾಧಿ' - ಎಂದು ಕವಿ ಕುವೆಂಪು ಕರೆದಿದ್ದಾರೆ. ವನವಾಸದಿಂದ ಹಿಂದಿರುಗಿದ ಲಕ್ಷ್ಮಣನನ್ನು ಸ್ವಾಗತಿಸಬೇಕೆಂದು ಮಾಂಡವಿ ಸೂಚಿಸಿದಾಗ ಊರ್ಮಿಳೆ ಪ್ರತಿಕ್ರಿಯಿಸುವ ರೀತಿ ನಿಜವಾಗಿಯೂ 'ಆತ್ಮ ವಿಕಸನದ ಪರಿಣಾಮ ಸಿದ್ದಿಯೇ' ಸರಿ! .... 'ಚಿಃ! ಕಡಲ್ಗಿದಿರ್ ಪನಿಗೇಂ ಪ್ರದರ್ಶನಂ? ದೇವರ ತಪಕ್ಕಿದಿರ್ ನಮ್ಮ ದೊರ್ತ್ಯಣಮಲ್ತೆ ! ಸಂತೋಷ ಸಮಯದೊಳ್ ತೋರ್ಪುದನುಚಿತವೆಮ್ಮ ಕಷ್ಟಮಂ! ತನ್ನ ತಾನಿಲ್ಲಗೈವುದೆ ಎಲ್ಲ ಸಾಧನೆಗೆ ಕೊನೆಯ ಗುರಿ ಮೇಣ್ ತಪಕೆ ಕೇಳ್ ತಂಗೆ ಪರಮ ಪ್ರಯೋಜನಂ'. ಅಧ್ಯಾತ್ಮದ ಮೊದಲ ಮೆಟ್ಟಲೇ ಅಹಂಕಾರ ನಿರಸನ. ಅರ್ಥಾತ್ ತನ್ನ ತಾನಿಲ್ಲ ಗೈಯ್ಯುವ ಕ್ರಿಯೆ. ಅದರಿಂದಲೇ ಮುಂದೆ ಎಲ್ಲ ಸಾಧನೆ... ಸಿದ್ಧಿ...

ಹೀಗೆ ರಾಮಾಯಣ ದರ್ಶನಂ ಕಾವ್ಯ ಅಧ್ಯಾತ್ಮದ ರಸಗಂಗಾಭಿಷೇಕದ ವಿರಾಡ್ ದರ್ಶನ!

**ಭಾರತಸಿಂಧುರಶ್ಮಿ**

ಆರ್ಯದ್ರಾವಿಡ ಸಂಸ್ಕೃತಿಗಳ ಸಂಗಮ-ಸಹಬಾಳ್ವೆಯ ಸುಂದರ ಚಿತ್ರಣವುಳ್ಳ ವೈದಿಕ ಕಥಾವಸ್ತುವಿನ ಸುತ್ತ ವಿ.ಕೃ. ಗೋಕಾಕರ ಈ ಮಹಾಕಾವ್ಯ ಹೆಣೆದುಕೊಂಡಿದೆ. ಈ ಸುಖೀ ಜೀವನದ ಪುರೋಹಿತರೇ ವಿಶ್ವಾಮಿತ್ರರು. ವಿಶ್ವಮಾನವತೆಯ ಮಟ್ಟಕ್ಕೇರಿದ ವಿಶ್ವಾಮಿತ್ರರ ಉಸಿರೇ ಗಾಯತ್ರಿ, ದೃಷ್ಟಿಯೇ ಸಾವಿತ್ರಿ. ದಸ್ಯುನಾಯಕ ಸುದಾಸ ಚಕ್ರವರ್ತಿಯಾದರೆ ವಿಶ್ವಾಮಿತ್ರರು ಇಲ್ಲಿ King Maker, ರಾಜಕರ್ತ ! ಒಂದೆಡೆ ವಿಶ್ವಾಮಿತ್ರರು ಸುದಾಸನಿಗೆ ಹೇಳುತ್ತಾರೆ -

**'ಇವ ಆರ್ಯ ಇವ ದಸ್ಯು ಇವ ದಾಸನೆಂದೆಣಿಸಿ**
**ನರಕ ನಿರ್ಮಿಸುವೆವು ನಾವು**
**ಒಂದೆ ನೆಲದಲಿ ಜನಿಸಿ, ಒಂದೆ ಜಲವಿರೆ ಫಲಿಸಿ**
**ನಮ್ಮ ಧರ್ಮದಲಿ ಸರ್ವಧರ್ಮಗಳ ತಿರುಳುಂಡು**
**ಬಾಳಿರಲು ತಲೆಯೆತ್ತುವುದು ಮಹಾಮಾನವ ಧರ್ಮ'**

ಇಲ್ಲಿಯ ಸರ್ವಧರ್ಮ ಸಮಭಾವ ಪ್ರಜ್ಞೆ ಲೋಕೋತ್ತರವಾದುದು. ಸತ್ ಮತ್ತು ಚಿತ್‌ಗಳು ಇರವು ಮತ್ತು ಅರಿವಿನ ಸಂಕೇತಗಳೆಂದು ಹೇಳುವ ಕವಿವಾಣಿಗೆ ಪ್ರತಿಯೊಂಮೂ ಸಂಕೇತವಾಗಿಯೇ ಕಾಣುತ್ತದೆ. ಹಿರಣ್ಯಗರ್ಭನು ವಿಶ್ವಾಮಿತ್ರನಿಗೆ ಹೇಳುವ ಮಾತು ನೋಡಿ -

'ನೀನು ಲಘುವಾಗಿ ಕಾಣದಿರು ಸುರರನ್ನು
ಸೋಮಘೃತ ಸಂಕೇತ ಮೂಲಧನಭಕ್ತಿ
ಬಯಸುವುದದನು ಸುರಗಣವು'

ಇಲ್ಲಿ ವೈದಿಕ ಕಾಲದ ಸೋಮಘೃತಗಳನ್ನು ಸಂಕೇತವೆಂದು ಸ್ವೀಕರಿಸಬೇಕೆಂಬ ಪಾಠವಿದೆ. Wisdom speaks through the images ಎಂಬ ಮಾತಿದೆ. ಪ್ರತಿಮೆಗಳಲ್ಲಿ ಅನುಭವ ವಿಸ್ತಾರವಿರುತ್ತದೆ. ಅಲ್ಲಮಪ್ರಭು ಹೇಳುವಂತೆ- 'ಪದವನರ್ಪಿಸಬಹುದಲ್ಲದೆ ಪದಾರ್ಥವನರ್ಪಿಸಬಾರದು !' ಪದದ ಆಚೆಗಿರುವ ಪ್ರತಿಮೆಯೇ ಪದಾರ್ಥ. ಶಬ್ದಸಂದಣಿಯಲ್ಲಿ ಪ್ರತಿಮೆಯನ್ನು ಅರ್ಥೈಸಿ ಅನುಭವಿಸುವಾತನೇ ನಿಜವಾದ ಸಹೃದಯಿ. ಶಬ್ದದ ಅರ್ಥಕ್ಕಿಂತಲೂ ಆಚೆಗೆ ಅರ್ಥದ ಅರ್ಥದಲ್ಲಿ ವಿಹರಿಸದೇ ಕಾವ್ಯಾನಂದ ದೊರೆಯದು. ಪುತಿನ ಹೇಳುವಂತೆ 'ಅರ್ಥದಲ್ಲಿ ರಮಿಸಿ ವಿರಮಿಸದೇ ಇದ್ದಾಗಲೇ' ಬ್ರಹ್ಮಾನಂದ ಸಾಧ್ಯವಾಗುವುದು. ಇಂತಹ ಆಧ್ಯಾತ್ಮಸೌಖ್ಯಕ್ಕೆ ಕಾವ್ಯಸಂಕೇತಗಳು ಒಂದೊಂದು ಮೆಟ್ಟಿಲುಗಳು. ಮಹಾಕಾವ್ಯ ಸಂದರ್ಭದಲ್ಲಿ ಈ ಪ್ರತಿಮಾ ವಿಧಾನ ನಮ್ಮ ಒಳಮನಕ್ಕೆ ಗೋಚರಿಸಿದಾಗಲೇ ಅದರ ರುಚಿ ಗೊತ್ತಾಗುವುದು. ಭಾರತ ಸಿಂಧುರಶ್ಮಿ ಇಂತಹ ಸಂಕೇತ ಪರಂಪರೆಯ ಆನಂದ ನೀಡುವ ಅಗ್ರಪಂಕ್ತಿಯ ಕಾವ್ಯವೆಂಬುದರಲ್ಲಿ ಸಂದೇಹವಿಲ್ಲ.

**ಶ್ರೀಹರಿಚರಿತೆ**

ಪುತಿನ ಅವರ ಶ್ರೀಹರಿಚರಿತೆಯಂತೂ ಪೂರ್ಣವಾಗಿ ಆಧ್ಯಾತ್ಮವಿಹಾರದ ಆನಂದ ನೀಡುವ ರಚನೆ. ಶ್ರೀಕೃಷ್ಣನ ಪುನಃಸ್ಮೃತಿ ಅಪಕೃತವಲ್ಲವೆಂದೂ, ಆತನಿಂದ ಉಪದಿಷ್ಟವಾದ ತತ್ತ್ವವು ಕೆಲಸಕ್ಕೆ ಬಾರದ ಹಳೆಯ ಸರಕಲ್ಲವೆಂದೂ ಕವಿಯ ಗಾಢ ಶ್ರದ್ಧೆ. ರಾಷ್ಟ್ರನಾಯಕರಿಗೂ ರಾಷ್ಟ್ರಕರಿಗೂ ಇರಬೇಕಾದ ಸಂಬಂಧ ಕೃಷ್ಣನಿಗೂ ಅರ್ಜುನನಿಗೂ ಇರಬೇಕಾದ ಆಪ್ತಸಂಬಂಧವೆಂದೂ, ಶ್ರೀಕೃಷ್ಣ ಸಮಷ್ಟಿ ತತ್ತ್ವವನ್ನೂ ಅರ್ಜುನ ನಮ್ಮಂತಹ ಮೋಹಗ್ರಸ್ತರನ್ನೂ ಪ್ರತಿನಿಧಿಸುತ್ತಾನೆಂದು ಅವರು ತಮ್ಮ ಉಪೋದ್ಘಾತದಲ್ಲಿ ಹೇಳಿದ್ದಾರೆ.

ಸ್ವಭಾವತಃ ಭಾಗವತ ಕವಿಯಾದ ಪುತಿನ ಇದೀಃಕಾವ್ಯದಲ್ಲಿ ಶ್ರೀಕೃಷ್ಣನ ಲೀಲಾಮಾನುಷ ವಿಗ್ರಹತ್ವವನ್ನು ಪ್ರತಿಪಾದಿಸಿದ್ದಾರೆ. ಬೃಂದಾವನ ತೀರದ ಭಾಂಡೀರ ಮಹಾವೃಕ್ಷ ಕೃಷ್ಣನ ಕೋಠ. ಆ ಮರದ ನೆಳಲೇ ಅವನ ಪ್ರಯೋಗಶಾಲೆ. ಮೊದಲ ಎಲೆಪೀಪಿ, ಅನಂತರದ ಬಿದಿರ ಪೀಪಿ, ಅದು ಕೊಳಲಾಗಿ ಸಂಸ್ಕಾರ ಪಡೆದುದು. ಆ ಮೋಹನ ಮುರಲಿಗೆ ಸಮಸ್ತ ಗೋಕುಲವೇ ಭಾವಪರವಶವಾದದ್ದು ಪ್ರತಿಯೊಂದೂ

ಆಪಾತಮಧುರ. ಸಂಗೀತಶಾಸ್ತ್ರ, ರಸಮೀಮಾಂಸೆ ಮತ್ತು ಅಧ್ಯಾತ್ಮ ತತ್ತ್ವಗಳ ತ್ರಿವೇಣೀ ಸಂಗಮದ ಸುಂದರ ಸಂಕೇತವಿದು. ರಾಧಾಮಾಧವರ ರಾಸಕ್ರೀಡೆ ಕೂಡಾ 'ದೇಹಪಾತ್ರೆಯಲ್ಲಿ ಆನಂದಪಾನ'ದ ಶುದ್ಧ ಪ್ರತೀಕ. ಒಲವಿಲ್ಲದ ದೇಹಗಳ ಮಿಲನ ಕೇವಲ ರೂಕ್ಷತೆ, ಬರ್ಬರತೆ. ನಿರ್ಮಲ ಪ್ರೇಮದಿಂದ ಒಂದಾಗುವುದೇ ದೈವಿಕ ದಾಂಪತ್ಯಯೋಗ. ಶೃಂಗಾರವೂ ಅಧ್ಯಾತ್ಮನಿಷ್ಠವಾಗುವುದು ಪುತಿನ ಕಾವ್ಯದ ರುಚಿಶುದ್ಧಿಯ ದ್ಯೋತಕ!

ಕಾವ್ಯದಲ್ಲಿ ಯಾವುದು ರಸವೋ ಅದೇ ಅಧ್ಯಾತ್ಮದಲ್ಲಿ ಪುರುಷೋತ್ತಮತ್ವ. ವಾಗತೀತವಾದ ಈ ತತ್ತ್ವವನ್ನು ಮಾತಿನಲ್ಲಿ ಹಿಡಿಯುವ ವಿನೀತ ಯತ್ನವೇ ಕಾವ್ಯಕ್ರಿಯೆ. 'ವಿಶ್ವಂ ವಿಷ್ಣು ವಷಟ್ಕಾರಃ !' ಇಂತಹ ಪುರುಷೋತ್ತಮನ ಸಾನ್ನಿಧ್ಯಕ್ಕಾಗಿ ಸದಾ ಪರಿತಪಿಸುವ ಜೀವಕ್ಕೆ, ಅದು ಅಲಭ್ಯವಾದಾಗ ದಿವ್ಯವಿಷಾದ ಆವರಿಸುತ್ತದೆ. ಈ ಒಳಕುದಿತ ಆತ್ಮೌಷಧದ ಸಿದ್ಧತೆಗೆ ಅನಿವಾರ್ಯ. ಜೀವಿಯು ರಸರಸೇಶ್ವರ ದರ್ಶನಕ್ಕೆ ಹಾತೊರೆಯುವ ಹಂತ ತಲುಪಿದಾಗಲೇ ಅಧ್ಯಾತ್ಮ ಅಂಕುರಿಸುವುದು. ಶ್ರೀಹರಿಚರಿತೆ ಈ ನಿಟ್ಟಿನಲ್ಲಿ ಒಂದು ಸಾರ್ಥಕ ಪ್ರಯತ್ನ.

## ಭವ್ಯಮಾನವ

ಇಲ್ಲಿಯೂ ಅಧ್ಯಾತ್ಮಸ್ಪರ್ಶವೇ ಮುಖ್ಯಕ್ರಿಯೆಯಾಗಿ ಕಂಡುಬರುತ್ತದೆ. ಸಕೃದ್ದರ್ಶನಕ್ಕೆ ಅಕ್ಕಮಹಾದೇವಿಯೇ ಕಥಾನಾಯಕಿಯಾದರೂ, ಕಾವ್ಯದೊಳಗೆ ಪ್ರವೇಶ ಪಡೆದಾಗ ಜೀವಕೇಂದ್ರಿತ ಚಿಂತನೆಯೇ ಗೋಚರಿಸುತ್ತದೆ. ಚೆನ್ನ ಮಲ್ಲಿಕಾರ್ಜುನನಲ್ಲಿ ಐಕ್ಯವಾಗಲು ಶ್ರೀಶೈಲಕ್ಕೆ ಹೊರಟುನಿಂತ ಅಕ್ಕಮಹಾದೇವಿಯನ್ನು ಗುರುಚೆನ್ನಮಲ್ಲನು ಪ್ರಪಂಚಮುಖವಾಗಿ ಹಿಂದಿರುಗಿಸುತ್ತಾನೆ. ಗಿರಿಮಲ್ಲನ ವಾಸ್ತವ ಪ್ರಶ್ನೆಗಳಿಂದ ಆಕೆ ಅಂತರಾಳಕ್ಕಿಳಿದು ತನ್ನ ವ್ಯಕ್ತಿತ್ವಕ್ಕೆ ಹೊಸದರ್ಶನವೊಂದನ್ನು ಕಂಡುಕೊಳ್ಳುತ್ತಾಳೆ. ಕಾಣದೇ ಇರುವ ಲೋಕದ ಸುಖಸಂತೋಷಕ್ಕಿಂತ ಕಾಣುವ ಈ ಲೋಕದಲ್ಲೇ ಬದುಕನ್ನು ಹಸನುಗೊಳಿಸುವ ಪ್ರಾಯೋಗಿಕ ಅಧ್ಯಾತ್ಮಕ್ಕೆ ಆಕೆ ಅನುರಕ್ತೆಯಾಗುತ್ತಾಳೆ. ಶ್ರೀಶೈಲ ಶಿಖರದ ಶಿವಾನುಭವವನ್ನು ಲೋಕಾಭಿಮುಖವಾಗಿಸಿ, ಸಾಮಾನ್ಯರ ಸುಖ ದುಃಖಕ್ಕೆ ಸ್ಪಂದಿಸಿ, ಅವರನ್ನು ಕತ್ತಲೆಯಿಂದ ಮೇಲೆತ್ತುವ ಸಾರ್ಥಕ ಧೋರಣೆ ಇಲ್ಲಿ ಪ್ರತಿಪಾದನೆಗೊಂಡಿದೆ. ಭೂಕೇಂದ್ರಿತವಾದ ಕಾವ್ಯದರ್ಶನ ನಮ್ಮ ಬದುಕಿಗೆ ನೀಡಿದ ಮನ್ನಣೆ. ಮಾನವ ಭವ್ಯತೆ ಇಲ್ಲಿ ಚೆನ್ನಾಗಿ ಬದುಕುವುದರಲ್ಲೇ ಇದೆ. ಆದ್ದರಿಂದಲೇ ಮರ್ತ್ಯಲೋಕವೆಂಬುದು ಕರ್ತಾರನ ಕಮ್ಮಟ ! ಇಲ್ಲಿ ಸಲ್ಲುವವರು ಮಾತ್ರ ಅಲ್ಲಿ ಸಲ್ಲುತ್ತಾರೆ. ಅಧ್ಯಾತ್ಮ ಇಲ್ಲಿ ವಿರಾಗದ ಛಾಯೆ ಪಡೆಯದೆ, ಅನುರಾಗದ ಆನಂದವನ್ನು

ಆಶ್ರಯಿಸಿದೆ. ಆಮುಷ್ಮಿಕ ಲಾಭಕ್ಕಿಂತಲೂ ಐಹಿಕ ಸಂತೋಷವನ್ನು ಬಯಸುವ ಹೊಸ ಸಂಸ್ಕಾರ, ಭೂಸನೂರ ಮಠರ ಮಹಾಕಾವ್ಯದರ್ಶನವೆನಿಸಿದೆ.

## ಅರವಿಂದರ ಸಾವಿತ್ರಿ

ಸಾವಿತ್ರಿ ಸವಿತೃವಿನ ಮಗಳು, ಬೆಳಕಿನ ಪುತ್ರಿ. ಅವಳ ಹೋರಾಟ ಕತ್ತಲೆಯೊಡನೆ; ಮೃತ್ಯು ಅಜ್ಞಾನ ಅಲ್ಪತೆಯೊಡನೆ. ಸತ್ಯವಾನ ಜೀವ ಪ್ರತೀಕ. ಸಾವಿತ್ರಿಯ ತಂದೆ ಅಶ್ವಪತಿ ಮರ್ತ್ಯತೆಯಿಂದ ಅಮರ್ತ್ಯದ ಕಡೆಗೆ ಮಾನವನನ್ನು ಕೊಂಡೊಯ್ಯುವ ಸಾಂದ್ರೀಕೃತಶಕ್ತಿ. ದೈವೀಶಕ್ತಿಯೊಂದಿಗೆ ಸಾವಿತ್ರಿ ಸಂಭಾಷಿಸುತ್ತಾ - 'ಲೋಕವನ್ನು ಬಹಿಷ್ಕರಿಸಿ ಶಾಶ್ವತ ಸನಾತನ ಸ್ವರ್ಗಕ್ಕೆ ತಾನು ಏರಬಯಸುವುದಿಲ್ಲವೆಂದೂ, ಸಂಕಟಮಯ ಭೂಮಿಯನ್ನು ಅಮರಪ್ರೇಮದ ಆತ್ಮದ ಮೂಲಕ ಸಂತೈಸುತ್ತೇನೆಂದೂ, ಜಗದ ಜೀವನದಲ್ಲೇ ತನ್ನನ್ನು ಇರಗೊಳಿಸಬೇಕೆಂದೂ' ಪ್ರಾರ್ಥಿಸುತ್ತಾಳೆ. ಈ ಬೆರಗುಗೊಳಿಸುವ ಅಚಲ ನಿರ್ಧಾರಕ್ಕೆ, ನೆಲವನ್ನು ಮಂದಾರ ಗಂಧದಿಂದ ತುಂಬುವ ಅದಮ್ಯ ಬಯಕೆಯ ಮಹಾನ್ ಸಂಕಲ್ಪಕ್ಕೆ ದೇವರೇ ಓಗೊಟ್ಟು ಭುವಿಗಿಳಿದು ಬರುತ್ತಾನೆಂಬ ಆತ್ಮಸ್ಥೈರ್ಯ ಈ ಕಾವ್ಯದ ಪರಮಸಿದ್ಧಿ. ಪರಮ ಪ್ರೀತಿಗೆ ಅಂತಹ ಅದ್ಭುತಶಕ್ತಿ ಸಾಧ್ಯವೆಂಬುದು ಅರವಿಂದರ ದರ್ಶನಸಾರ. ಆ ಮನೋಪರ ಅಧ್ಯಾತ್ಮ ತತ್ತ್ವವೇ ಈ ಕಾವ್ಯದ ಅಂತರಾತ್ಮ.

## ಇತರ ಮಹಾಕಾವ್ಯಗಳು

ತುಳು ಸಂಸ್ಕೃತಿಯ ಪಡಿಯಚ್ಚಿನಂತಿರುವ ಮಂದಾರ ರಾಮಾಯಣವೂ ಅಧ್ಯಾತ್ಮವನ್ನು ಅಲಕ್ಷಿಸುವುದಿಲ್ಲ. ಹರಿವನೀರು, ಉರಿವಬೆಂಕಿ, ನೆಲಬಾನು ಎಲ್ಲೆಲ್ಲೂ ರಾಮಮಂತ್ರವೇ ನಿನದಿಸುವ, ಮೃಗಪಕ್ಷಿ, ಮುಂಜಿನೊಣ ಜೀವಕೋಟಿಗಳೆಲ್ಲಾ ರಾಮನಾಮೋಚ್ಚಾರಣೆಯನ್ನೇ ಜಪಿಸುವ ವಿಮಲವಿಶ್ವವೊಂದನ್ನು ಸಾಕಾರಗೊಳಿಸುತ್ತದೆ. 'ಸಂಸಾರದಾಯೆರೆಗ್ ಪೋಯೆರೆ ಅಕ್ಕಿಜ್ಜಂದಿನ ಅಳಿದಾಂತಿ ಪಾಂಪೊಂಜಿ ಪಾಡ್ದ್ ಕಟ್ಟೊಂಡ ಪುಣ್ಯೊನು' ಎನ್ನುವಲ್ಲಿ ಭವಬಂಧನವನ್ನು ಮೀರುವ ತುಡಿತವನ್ನು ದರ್ಶಿಸಬಹುದು. ಮಿಥಿಲೆಗೆ ಬೆಂಕಿಬಿದ್ದಾಗ 'ಪದ್ಮಪತ್ರಮಿವಾಂಭಸಾ'ವೆಂಬ ರೀತಿಯಲ್ಲಿ 'ತನ್ನದೇನೂ ಸುಟ್ಟುಹೋಗಿಲ್ಲ'ವೆನ್ನುವ ಯೋಗಿಜನಕನ ಅಧ್ಯಾತ್ಮಚಿತ್ರ ಮನಸ್ಸಿನಲ್ಲಿ ಅಚ್ಚಳಿಯದೆ ಉಳಿಯುತ್ತದೆ. ಜಯದೇವಿತಾಯಿ ಲಿಗಾಡೆಯವರ 'ಸಿದ್ಧರಾಮ ಪುರಾಣ', ಕಾಶಿವಿಶ್ವನಾಥ ಶೆಟ್ಟರ 'ಬುದ್ಧಚರಿತ ಮಹಾಮಧು' ಸುಜನಾ ಅವರ 'ಯುಗಸಂಧ್ಯಾ', ವೀರಪ್ಪ ಮೊಯಿಲಿಯವರ 'ಶ್ರೀರಾಮಾಯಣ ಮಹಾನ್ವೇಷಣಂ' ಮುಂತಾದವುಗಳು ಆಧುನಿಕ ಯುಗದ ಇತರ ಮಹಾಕಾವ್ಯ ಸಂಪತ್ತುಗಳು. ಸಿದ್ಧರಾಮ ಪುರಾಣದಲ್ಲಿ ಮತ್ತೆ ಶಿವಶರಣ ತತ್ತ್ವದ ಅನುಭಾವ ಮಡುಗಟ್ಟಿರುವುದನ್ನು ಕಾಣಲು ಸಾಧ್ಯವಾದರೆ.

ಬುದ್ಧಚರಿತ ಮಹಾಮಧುವಿನಲ್ಲಿ ಅಹಿಂಸಾಸ್ತೇಯಗಳ ಬುದ್ಧಚರಿತೆ ನಮ್ಮನ್ನು ಮನುಷ್ಯ ಜೀವನದ ಮಧುರ ಅಧ್ಯಾತ್ಮಕ್ಕೆ ಸೆಳೆಯುತ್ತದೆ. ಕನ್ನಡ ನಾಡಿನಲ್ಲಿ ಮಹಾಕಾವ್ಯಗಳ ರಚನೆ ಮುಗಿದು ಹೋದ ಘಟನೆಯಲ್ಲ. ಈ ಶತಮಾನದ ಆರಂಭದಲ್ಲೂ ಇನ್ನೂ ಒಂದೆರೆಡು ಮಹಾಕಾವ್ಯಗಳು ರಚನೆಗೊಳ್ಳುತ್ತಿವೆ ಎಂಬುದು ನಾವೆಲ್ಲಾ ಹೆಮ್ಮೆ ಪಡಬೇಕಾದ ಸಂಗತಿ.

ಗೋಖಲೆಯವರು ಹೇಳುತ್ತಿದ್ದ Public life must be spiritualised ಎಂಬ ಮಾತು ಇಂದಿಗೂ ಸಂಗತವಾದುದು. ನಮ್ಮ ಸಮಾಜದಲ್ಲಿ ಆಧ್ಯಾತ್ಮಿಕ ಮನೋಭಾವ ಮರೆಯಾಗಿ ಹೋಗುತ್ತಿರುವ ಈ ಕಾಲಘಟ್ಟದಲ್ಲಿ ಮಹಾಕಾವ್ಯಗಳ ಪ್ರಭಾವ ಪ್ರೇರಣೆ ಹೆಚ್ಚು ಹೆಚ್ಚು ಅಗತ್ಯವೆಂದು ಕಾಣುತ್ತದೆ. ವಿನೋಬಾ ಭಾವೆಯವರು - 'ಮತಗಳ ಮತ್ತು ರಾಜಕೀಯದ ಕಾಲ ಮುಗಿದುಹೋಯಿತು; ಇನ್ನು ಮುಂದೆ ಅಧ್ಯಾತ್ಮ ಮತ್ತು ವಿಜ್ಞಾನದ ಕಾಲ ಬರಬೇಕಾಗಿದೆ' ಎಂದು ಹೇಳಿದ್ದುಂಟು. 'ಜೀವನದಲ್ಲಿ ಅಧ್ಯಾತ್ಮ' ಎಂಬುದನ್ನು ನಾವು ತಪ್ಪಾಗಿ ಗ್ರಹಿಸಿಕೊಂಡಿದ್ದೇವೆ. ರಾಜಕೀಯ, ಶಿಕ್ಷಣ ಈ ಎಲ್ಲದರಲ್ಲೂ 'ಅಧ್ಯಾತ್ಮ' ಪದವನ್ನು ಸಮರ್ಪಕವಾಗಿ ವ್ಯಾಖ್ಯಾನಿಸುತ್ತಿಲ್ಲ. ಅಧ್ಯಾತ್ಮವೆಂದರೆ ಧರ್ಮವಲ್ಲ, ಮತವಲ್ಲ, ಪಂಥವಲ್ಲ. ಅದು ಎಲ್ಲ ಧರ್ಮದ ಸಾರ. ಮಹಾಕಾವ್ಯಗಳಲ್ಲಿ ಅಧ್ಯಾತ್ಮ ಉಪದಿಷ್ಟವಾದರೆ, ಅದು ಎಲ್ಲ ಕಾಲಕ್ಕೆ ಬೇಕಾದ ಅನಿವಾರ್ಯತೆ ಎಂಬುದರಲ್ಲಿ ಸಂದೇಹವಿಲ್ಲ. ಇಂದು ನಮ್ಮ ಬದುಕು ಎಂದೆಂದಿಗಿಂತಲೂ ಹೆಚ್ಚು ಗೋಜಲು ಗೊಂದಲಗಳ ಆಡುಂಬೊಲವಾಗಿದೆ. ಸೃಜನಶೀಲತೆ ಮತ್ತು ವೈಚಾರಿಕತೆಗಳು ಅನ್ಯದೇಶೀಯ ಸಂಸ್ಕೃತಿಗಳ ದಾಳಿಗೆ ಸಿಲುಕಿ ನಲುಗುತ್ತಿವೆ. ಈ ತಲ್ಲಣದ ಕ್ಷಣಗಳಲ್ಲಿ ಮಹಾಕಾವ್ಯಗಳ ಅಧ್ಯಾತ್ಮಬೋಧೆ ಮನಸ್ಸಿಗೆ ಶಾಂತಿ ಸಮಾಧಾನ ನೀಡುವುದರಲ್ಲಿ ಅನುಮಾನವಿಲ್ಲ.

ಉತ್ತಮ ಕಾವ್ಯವನ್ನು ಓದಿದಂತೆ ಇನ್ನೂ ಓದಬೇಕೆಂದೆನಿಸುತ್ತದೆ. ಮತ್ತೆ ಮತ್ತೆ ಓದಿದಷ್ಟೂ ಅದರ ಮಹತ್ವ ಹೆಚ್ಚಾದಂತೆ ತೋರುತ್ತದೆ. ಹೊಸ ಹೊಸ ವಿಷಯಗಳು ಮನಸ್ಸಿನಲ್ಲಿ ಹೊಳೆಯುತ್ತವೆ. ಅದನ್ನು ಕಂಡಕಂಡವರಿಗೆಲ್ಲ ಓದಿ ಹೇಳಬೇಕೆನಿಸುತ್ತದೆ. ಇಂತಹ ಸೊಗಸಾದ ಕಾವ್ಯ ಅನೇಕರಿಗೆ ಅಪರಿಚಿತವಾಗಿದೆಯಲ್ಲ ಎಂದು ದುಃಖವಾಗುತ್ತದೆ.

–ಕುವೆಂಪು

<u>ವಿಡಂಬನೆ</u>

# ಹೀಗೊಂದು ಕವಿ ಸಮ್ಮೇಳನ

**- ಎಚ್. ಆನಂದರಾಮ ಶಾಸ್ತ್ರೀ**

ಶಂಖವಾದ್ಯಪುರದಲ್ಲಿ ಈಚೆಗೆ ವಿಶ್ವ ಕವಿಸಮ್ಮೇಳನ ನಡೆಯಿತು. ವಿಶ್ವದ ಎಲ್ಲೆಡೆಯಿಂದ ಕವಿಗಳು ಬಂದು ಭಾಗವಹಿಸಲು ಮುಕ್ತ ಅವಕಾಶವಿತ್ತಾದರೂ ಶಂಖವಾದ್ಯಪುರ ಮತ್ತು ಅಕ್ಕಪಕ್ಕದ ಎರಡೂರುಗಳಿಂದ ಬಂದ ಕನ್ನಡ ಕವಿಗಳನ್ನು ಬಿಟ್ಟರೆ, ಇನ್ನಾರೂ ಆ ಅದ್ಭುತ ಸಮ್ಮೇಳನದತ್ತ ಗಮನವನ್ನೇ ಹರಿಸದಿದ್ದುದು ಕಾವ್ಯ ಸರಸ್ವತಿಗಾದ ಅವಮಾನವೇ ಸರಿ. ಈ ಅವಮಾನದ ವಿರುದ್ಧ ಪ್ರತಿಭಟನಾ ರ್‍ಯಾಲಿ ನಡೆಯಬೇಕು. ಇರಲಿ.

ಇಂಥದೊಂದು ಸಮ್ಮೇಳನ ಇದೆಯೆಂದು ಆ ಎರಡೂರು ಬಿಟ್ಟು ಮೂರನೇ ಊರಿಗೆ ಗೊತ್ತಾಗಿದ್ದರೆ ಇನ್ನೊಂದಷ್ಟು ಕವಿಗಳು ಹಾಜರಾಗುತ್ತಿದ್ದರು. ಅದು ಬೇರೆ ಮಾತು. ಸಮ್ಮೇಳನದಲ್ಲಿ ಅಂದು ಎಂಟು ಮಂದಿ ಕವಿಗಳೂ ಏಳು ಮಂದಿ ಶ್ರೋತೃಗಳೂ ಇದ್ದರು. ಆ ದಿನ ಊದಲ್ಪಟ್ಟ ಮೊದಲ ಕವನದ ಹೆಸರು 'ಶಂಖವಾದ್ಯ' ರಚಿಸಿ ಊದಿದ ಕವಿ, 'ಕ್ಯಾತ' ಕವಿ ಧ್ವನಿಕುಮಾರ್. ಆ ಕವನ ಇಂತಿದೆ :

**ಶಂಖವಾದ್ಯವು ಮೊಳಗುತಿದೆ ಇಲ್ಲಿ**
**ಶಂಖವಾದ್ಯಪುರದಲ್ಲಿ ನಿಃಶಂಕೆ**
**ನೀವೆಲ್ಲ ಇರುವಿರಿ ಇಂದು ತ್ರಿಶಂಕು ಸ್ಥಿತಿಯಲ್ಲಿ**
**ಶಂಖವೋ ? ಜಾಗಟೆಯೋ ? ತಾಳಮದ್ದಲೆಯೊ ?**
**ಬಾಳಲಾರದ ಬದುಕುಗೇಡಿಗಳ ತಲೆಯೊ ?**
**ತಿಳಿಯದಾಗಿದೆ ನನಗೆ**
**ತಿಳಿಯಿತೇ ನಿಮಗೆ ?**
**ದಾರಿಬಿಡಿ ತಿಳಿದರೆ**
**ತಿಳಿಯದಿದ್ದರೆ ಬಿಡಿ ದಾರಿ**
**ನಿಮ್ಮ ದಾರಿ ನಿಮಗೆ**

ನನ್ನ ದಾರಿ ನನಗೆ
ಶಂಖವಾದ್ಯವು ಮೊಗಳುತಿದೆ ಇಲ್ಲಿ
ಶಂಖವಾದ್ಯಪುರದಲ್ಲಿ.

ಈ ಕವನ ಎಷ್ಟು ಪರಿಣಾಮಕಾರಿಯಾಗಿತ್ತೆಂದರೆ ಕವಿಯ ಆದೇಶದ ಮೇರೆಗೆ ಮೂವರು ಶ್ರೋತೃಗಳು ಜಾಗ ಖಾಲಿಮಾಡಿದರು.

ಅನಂತರ ಊದಲಾದ ಕವನದ ಹೆಸರು 'ಅನರ್ಥ'. ಸ್ವರಚಿತ ಕವನ ವಾಚಿಸಿದವರು ಕ್ರಾಂತಿಕವಿ ಕ್ರಾಂತಿಕುಮಾರ್. ಆ ಕವನ ಹೀಗಿದೆ :

**ಈಡಿಪಸ್, ಕೊಲಂಬಸ್, ಥಾಮಸ್, ಆಕ್ಟೋಪಸ್**
**ಬ್ರೆಕ್ಟ್, ಫ್ಯಾಕ್ಟ್, ಕಾಂಟ್ರಾಕ್ಟ್**
**ಗಲ್ಲಿಗಲ್ಲಿಗಳಲ್ಲಿ ಶೋಷಣೆ**
**ತತ್ವ, ನಿರಾಳತ್ವ, ನಿಸ್ಸಹಾಯಕತತ್ವ**
**ಹರ್ಕ್ಯುಲಿಸ್‌ನ ಬಾಹುಗಳಲ್ಲಿ**
**ಆಫ್ರಿಕದ ಕಪ್ಪುಜನ**
**ನೆಲ್ಸನ್ ಮಂಡೇಲಾ, ಮಾರ್ಕ್ಸ್ , ಮಣ್ಣು, ಮಸಣ**
**ಗಾಂಧಿ, ಬುದ್ಧರೆಲ್ಲ ಏನಾದರು ?**
**ಗಾರ್ಕಿ, ಟಾಲ್‌ಸ್ಟಾಯ್, ಟೀಪಾಯ್‌ಗಳೆಲ್ಲ**
**ಎಲ್ಲಿ ಹೋದರು ? ಎಲ್ಲಿ ? ಎಲ್ಲಿ ?**
**ಇದಕ್ಕೆ ಅರ್ಥವೆಲ್ಲಿ ? ಆದಿಯೆಲ್ಲಿ ? ಅಂತ್ಯವೆಲ್ಲಿ ?**
**ಅರ್ಥವಾಗದೆ ನಿಂತಿದ್ದೇನೆ ನಾನು ಇಲ್ಲಿ**

ಇಷ್ಟು ಹೇಳಿ ಕ್ರಾಂತಿಕುಮಾರ್ ಕುಳಿತರು. 'ಅನರ್ಥ' ಕವನವನ್ನು ಅರ್ಥಮಾಡಿಕೊಳ್ಳಲಾರದ ಮತ್ತಿಬ್ಬರು ಶ್ರೋತೃಗಳು ಎದ್ದು ಹೊರನಡೆದರು.

ಮೂರನೇ ಕವನ 'ವಿಮಾನ' ಬರೆದು ವಾಚಿಸಿದವರು 'ವಾಚಸ್ಪತಿ' ಎಂಬ ಕಾವ್ಯನಾಮದಿಂದ 'ಕ್ಯಾತ'ರಾದ ರೈಲುಬಂಡಿ ರೇವಣ್ಣನವರು. ಆ ಕವನ ಈ ಕೆಳಗಿನಂತಿದೆ:

**ವಿಮಾನ**
**ಹರಾಜಾಗುತ್ತಿರುವ ಮಾನ**
**ಬಿಟ್ಟವರ ಬಿಡಲಾರದ ಬಿಟ್ಟೋಬಿಡದ**
**ಸುಟ್ಟೋಡಲಿನ ದಾವಾಗ್ನಿಯ ಬೆಂಕಿಯಲಿ**

ಬೆಂದು ಕರಗಿ ಸುಟ್ಟು ಕರಕಾಗಿ ಸೀದುಹೋದ
ಸಶರೀರವಾಣಿ ಅಶರೀರವಾಣಿಯಾಗಿ, ಕಾಗೆಯಾಗಿ
ಕೋಗಿಲೆಯಾಗಿ, ಕುಹೂ ಕಲರವ ಮಂಜುಳಗಾನ
ಮಧುರ ನಿನಾದದ ಎಡೆಯಲ್ಲಿ ಬೇಯುತ್ತಿರುವ
ಮಾನವ ಮಾನವನಾಗದೆ ದಾನವನಾಗಿ
ಕಾಣದ ದೈವಕೆ ತಲೆಬಾಗಿ, ದೀನ ದಲಿತರೆ
ಕೊರಳಾಗಿ, ಉರುಳಾಗಿ, ಇರುಳಾಗಿ
ಪಗಲಾಗಿ, ಮುಗಿಲಾಗಿ, ಮಳೆಯಾಗಿ, ವಸಂತವಾಗಿ
ಚಿಗುರಿದ ವೃಕ್ಷದ ಬೇರು ಅಲ್ಲಾಡಿ
ಅತ್ತವರ ಪಾಡೇನು ? ಈ ನನ್ನ ಹಾಡೇನು ?
ವಿಮಾನ

ಈ ಕವನ ಮುಗಿಯುತ್ತಿದ್ದಂತೆ ಇನ್ನೋರ್ವ ಶ್ರೋತೃವು ಹೊರಕ್ಕೆ ಧಾವಿಸಿದ. ರೈಲುಬಂಡಿ ರೇವಣ್ಣನವರ ವಿಮಾನ ದಾಳಿಯ ನಂತರವೂ ಅಚಲವಾಗಿ ಕುಳಿತಿದ್ದ ಒಬ್ಬನೇ ಶ್ರೋತೃವನ್ನು ಕಂಡು ನನಗೆ ಆಶ್ಚರ್ಯವೂ, ಸಂತಸವೂ, ಅನುಕಂಪವೂ, ದುಃಖವೂ ಉಂಟಾಯಿತು. ಅವನ ಬಳಿಗೆ ಹೋಗಿ ನಾನು ಕೇಳಿದೆ.

'ಏನಪ್ಪಾ, ಕವಿತೆ ಅಂದ್ರೆ ನಿನಗೆ ಅಷ್ಟೊಂದು ಇಷ್ಟಾನಾ ?'

ಅದಕ್ಕಾತ ಹೇಳಿದ, 'ಏ! ಕೌತೇನೋ ಸೌತೇನೋ ಅದ್ಯಾವೋನಿಗ್ಬೇಕು ?

ಅಲ್ಲಿ ಕೊನೇಗ್ ಕುಂತವ್ನಲ್ಲಾ ಇಸ್ಟೇಜ್ ಮ್ಯಾಕೆ, ಹುಡುಗ, ಅವ ಪರ್ಮೇಶಿ ಅಂತ. ನಮ್ಮಳ್ಳಿಯೋನು. ಪಕ್ದಳ್ಳಿ ನಮ್ದು. ನನ್ಗಾತ ಹತ್ರುಪಾಯ್ ಹಾಕಿ ಕೊಡ್ಬೇಕು. 'ಇಲ್ಲಿಗ್ ಬಾ. ನಾನದೇನೋ ಓದ್ತೀನಿ. ಇಪ್ಪತ್ರುಪಾಯ್ ಕೊಡ್ತಪ್ರಿ. ನಿನ್ನ ಹತ್ರುಪಾಯ್ ಮುಕದ್ಮ್ಯಾಗೆ ಬಿಸಾಕ್ತೀನಿ' ಅಂದ. ಅದ್ಕೇ ಬಂದಿವ್ನಿ. ಆವಯ್ಯ ಏಟೊತ್ಗೆ ಸಾ, ಓದದು ?'

ನಾನು ದಂಗಾದೆ! 'ಓದ್ತಾನೆ, ಓದ್ತಾನೆ. ಆತನ ಸರ್ತಿ ಬರಬೇಕಲ್ಲಾ ! ಅಲ್ಲೀವರೆಗೂ ಕೇಳ್ತಾ ಕುತಿರು' ಅಂತ ಆ ಶ್ರೋತೃ ಮಹಾಶಯನಿಗೆ ಹೇಳಿ ಅಲ್ಲಿಂದ ಕಂಬಿಕಿತ್ತೆ. ●

# ಪುತಿನ ಜನ್ಮ ಶತಮಾನೋತ್ಸವ - ಒಂದು ವರದಿ

'ಪುತಿನ ಅವರು ಅದ್ಭುತ ಕಲ್ಪನಾಶಕ್ತಿ ಇದ್ದ ಕವಿ. ಅವರ ಹೊರಗಣ್ಣಿನ ದೃಷ್ಟಿ ಮಂದವಾಗಿದ್ದರೂ ಒಳಗಣ್ಣು ಚುರುಕಾಗಿತ್ತು. ಸಾಮಾನ್ಯರಿಗೆ ಗೋಚರವಾಗದ ಸತ್ಯ. ಸೂಕ್ಷ್ಮಗಳು ಅವರಿಗೆ ಗೋಚರಿಸುತ್ತಿದ್ದವು' ಎಂದು ಕವಿ ಡಾ. ಎಚ್.ಎಸ್. ವೆಂಕಟೇಶಮೂರ್ತಿ ಹೇಳಿದರು.

ಆರ್.ಟಿ. ನಗರದ ಶಿವರಾಮ ಕಾರಂತ ವೇದಿಕೆ ಏರ್ಪಡಿಸಿದ್ದ ಪುತಿನ ಜನ್ಮ ಶತಮಾನೋತ್ಸವದ ಮುಖ್ಯ ಅತಿಥಿಯಾಗಿ ಮಾತನಾಡುತ್ತಿದ್ದ ಅವರು, ಪುತಿನ ಅವರ ಮಾಮೂಲೀ ಸಂಭಾಷಣೆಯಲ್ಲೂ ಕಾವ್ಯದ ದರ್ಶನಗಳಿದ್ದವು. ಅವರು ಹೊರನೋಟಕ್ಕೆ ಮಡಿವಂತರಂತೆ ಕಾಣುತ್ತಿದ್ದರೂ ಅಂತರಂಗದಲ್ಲಿ ವಿಶಾಲ ಮನೋಭಾವದನ ಾಗಿದ್ದರು. ಜಾತಿಮತ ಭೇದಗಳನ್ನು ಮೀರಿದ್ದರು. ಲೋಕದೊಂದಿಗೆ ಸ್ವಾರ್ಥವಿಲ್ಲದ



ಸಂಬಂಧ ಸಾಧಿಸುವುದೇ ಆಧ್ಯಾತ್ಮ ಎಂದು ಅವರು ನಂಬಿದರು. ರಸ ಎನ್ನುವುದು ಕೇವಲ ಸಾಹಿತ್ಯದಲ್ಲಿ ಮಾತ್ರವಲ್ಲ. ಜೀವನದ ಪ್ರತಿಯೊಂದು ಸಂದರ್ಭದಲ್ಲೂ ಸೃಷ್ಟಿಯಾಗಬಲ್ಲದು ಎನ್ನುತ್ತಿದ್ದರು. ಜೀವನದ ಆನಂದ ಸವಿಯಲು ನಾವು ವಿಫಲವಾಗಿರುವುದಕ್ಕೆ ಪಾಶ್ಚಾತ್ಯ ಜ್ವರದಿಂದ ಉಂಟಾಗಿರುವ ನಮ್ಮ ಸಾಂಸ್ಕೃತಿಕ ಮರೆವೇ ಕಾರಣ ಎನ್ನುವುದು ಅವರ ಅಭಿಪ್ರಾಯವಾಗಿತ್ತು. ಅವರು ಇತರರ ಕುರಿತು ತೋರುತ್ತಿದ್ದ ಪ್ರೀತಿ, ವಿಶ್ವಾಸ ವಾತ್ಸಲ್ಯ, ಸ್ನೇಹ, ಮೆಚ್ಚುಗೆ ಅಸಾಧಾರಣವಾಗಿತ್ತು. ಅಂಥ ಮಹಾನುಭಾವರ ಜೀವನದಿಂದಲೂ ಕೃತಿಗಳಿಂದಲೂ ಪಡೆಯುವ ಸಂಸ್ಕಾರದಿಂದ ನಮ್ಮ ವ್ಯಕ್ತಿತ್ವ ಬೆಳೆಯುತ್ತದೆ ಎಂದರು.

ಖ್ಯಾತ ವಿಮರ್ಶಕಿ ಡಾ. ವಿಜಯಾ ಸುಬ್ಬರಾಜ್ ಅವರು ಪುತಿನ ಅವರ ಗೀತನಾಟಕಗಳ ಸತ್ವವನ್ನೂ ಸೊಗಸನ್ನೂ ಸಂಗೀತ ಪ್ರಜ್ಞೆಯನ್ನೂ ಮನಮುಟ್ಟುವಂತೆ ವಿವರಿಸಿದರು. ಪುತಿನ ಅವರ ನಿಕಟವರ್ತಿಯಾಗಿದ್ದ ಹಿರಿಯ ಸಾಹಿತಿ, ಗಾಂಧಿವಾದಿ ನೀಲತ್ತಹಳ್ಳಿ ಕಸ್ತೂರಿ ಅವರು ಪುತಿನ ಅವರ ಒಡನಾಟದಲ್ಲಿ ಅನುಭವಿಸಿದ ಅನೇಕ ಸ್ವಾರಸ್ಯಕರ ಸಂಗತಿಗಳನ್ನೂ ನುಡಿಮುತ್ತುಗಳನ್ನೂ ಹಂಚಿಕೊಂಡರು.

ಆರಂಭದಲ್ಲಿ ಜಿ.ವಿ. ಕೆದಿಲಾಯರು ಸ್ವಾಗತಿಸಿದರು. ಪ್ರೇಮಾ ಭಟ್ ಸಭೆಯ ಅಧ್ಯಕ್ಷತೆ ವಹಿಸಿದ್ದರು. ಕೊನೆಯಲ್ಲಿ ವೇದಿಕೆಯ ಕಾರ್ಯದರ್ಶಿ ಪಾ. ಚಂದ್ರಶೇಖರ ಚಡಗರು ಧನ್ಯವಾದವಿತ್ತರು. ಅನಂತರ ನಳಿನಿ ಸಿ. ಚಡಗ ಮತ್ತು ವೃಂದದವರಿಂದ ಪುತಿನ ಗೀತೆಗಳ ಗಾಯನ ಕಾರ್ಯಕ್ರಮ ನಡೆಯಿತು.

ನಮ್ಮ ಜನರ ಸ್ಥಿತಿ ಉತ್ತಮವಾಗಬೇಕಾದರೆ ಮೊದಲು ಅವರ ಮನಸ್ಸಿನ ಭಾವನೆಗಳಲ್ಲಿ ಕೆಲವು ಬದಲಾವಣೆಗಳಾಗಬೇಕು. ಮೊಟ್ಟಮೊದಲು ನಮ್ಮ ಜನಕ್ಕೆ ಬದುಕಿನಲ್ಲಿ ಶ್ರದ್ಧೆ ಹೆಚ್ಚಬೇಕು. ಎರಡನೆಯದಾಗಿ ನಮಗೆ ಮನುಷ್ಯ ಪ್ರಯತ್ನದಲ್ಲಿ ನಂಬಿಕೆ ಹೆಚ್ಚಬೇಕು. ಮೂರನೆಯದಾಗಿ ಜನದ ದಿನಚರಿಯ ನಡವಳಿಕೆಯಲ್ಲಿ ಒಂದು ಸವಿಯ ಬೆಳಕೂ, ಸ್ನೇಹಭಾವವೂ ಕಾಂತಿಯೂ ತುಂಬಿರಬೇಕು.

-ಡಿ.ವಿ. ಗುಂಡಪ್ಪ

ಧಾರಾವಾಹಿ ಕಾದಂಬರಿ

# ಪಡುಕೆರೆಯ ಪವಾಡ ಪುರುಷರು

- ಪಾ. ಚಂದ್ರಶೇಖರ ಚಡಗ

## ಭಾಗ - ೧

ನಾರಾಯಣ, ನಾರಾಯಣ, ನಾರಾಯಣ, ನಾರಾಯಣ . . . . ಹೀಗೆ ನೂರೆಂಟು ಬಾರಿ ಮನಸ್ಸಿನಲ್ಲಿ ಭಗವಂತನ ನಾಮವನ್ನು ಉಚ್ಚರಿಸಿ 'ಮಂಗಲಂ ಭಗವಾನ್ ವಿಷ್ಣು ಮಂಗಲಂ ಮಧುಸೂದನಃ ಮಂಗಲಂ ದೇವಕಿಪುತ್ರೋ ಮಂಗಲಂ ಗರುಡ ಧ್ವಜಃ, ಉತ್ತಿಷ್ಠೋತ್ತಿಷ್ಠ ಗೋವಿಂದ, ಉತ್ತಿಷ್ಠ ಗರುಡ ಧ್ವಜಃ' ಎಂದು ಹೇಳುತ್ತಿರುವಾಗ ಆಗ ತಾನೇ ಅರವತ್ತರ ಅಂಚನ್ನು ದಾಟಿದ್ದ ರಾಜಾರಾಮಭಟ್ಟರ ಮುಖದಲ್ಲಿ ನಗೆಯೊಂದು ಮಿಂಚಿ ಮಾಯವಾಯಿತು. ತಾವು ಬಾಲ್ಯದಲ್ಲಿ ಈ ಶ್ಲೋಕವನ್ನು ತಿರುಚಿ 'ಉಪ್ಪಿಟ್ಟು ಉಪ್ಪಿಟ್ಟು ಗೋವಿಂದ ಮತ್ತಿಷ್ಟು ಕಮಲಾಕಾಂತ' ಎಂದು ಅಣಕವಾಡುತ್ತಿದ್ದುದು ನೆನೆದು ನಗು ಬಂತು. 'ಛೀ . . . ವಯಸ್ಸು ಅರವತ್ತಾದರೂ ನಿಮಗಿನ್ನೂ ಚೇಷ್ಟೆ ಹೋಗಿಲ್ಲ' ಎಂದು ಮಡದಿ ಕಮಲಾಕ್ಷಿ ಅವರನ್ನು ಆಗಾಗ್ಗೆ ಛೇಡಿಸುತ್ತಿರುವುದೂ ಅವರಿಗೆ ನೆನಪಾಯಿತು. 'ಹುಣಸೇಮರ ಹಳತಾದರೂ ಅದರ ಹುಣಸೇಹಣ್ಣು ಹಳತಾಗದು'ಎಂದು ತಾವು ಆಕೆಗೆ ಉತ್ತರಿಸುತ್ತಿರುವುದೂ ಅವರಿಗೆ ನೆನಪು ಬಂತು.

ಮಧ್ಯರಾತ್ರಿಯಲ್ಲಿ ಎದ್ದು ರಾಜಾರಾಮಭಟ್ಟರ ಕೈ ಮಡದಿಯ ಕುಚಗಳನ್ನು ಮರ್ದಿಸುತ್ತಿರುವುದೂ, ಆಕೆ 'ಬೇಡ . . . ಬೇಡ ನನಗೆ ಜೋರು ನಿದ್ದೆ ಬರುತ್ತಿದೆ' ಎನ್ನುವುದೂ ಅವರ ಬಾಳಿನಲ್ಲಿ ದಿನನಿತ್ಯದ ಮಾತಾಗಿದೆ. ಎಂತಹ ಆದರ್ಶ ದಂಪತಿಗಳು ಎಂದು ಪಡುಕೆರೆಯ ಜನರೆಲ್ಲಾ ಹೊಗಳುತ್ತಾ, ಪಾತ್ರಿಬೆಟ್ಟಿನಲ್ಲಿರುವ ಬ್ರಾಹ್ಮಣರಲ್ಲಿ ಕೆಲವರು 'ನಮ್ಮ ರಾಜಾರಾಮನಿಗೊಂದು ಮರುಳು ಮಾಡಲಿಕ್ಕೆ ಕೆಲಸವಿಲ್ಲ ಎಂದು ಊರಿನ ಉದ್ಧಾರಕ್ಕೆ ಹೊರಟಿದ್ದಾನೆ' ಎನ್ನುವುದೂ ಸರ್ವೇ ಸಾಮಾನ್ಯವಾಗಿತ್ತು. ಸ್ಟೇಟ್ ಬ್ಯಾಂಕ್ ಅಫ್ ಮೈಸೂರಿನ ರೀಜನಲ್ ಮ್ಯಾನೇಜರ್ ಆಗಿ ನಿವೃತ್ತರಾದ ರಾಜಾರಾಮ ಬೆಂಗಳೂರಿನಿಂದ ತನ್ನ ಬಿಡಾರವನ್ನು ಪಡುಕೆರೆಗೆ ವರ್ಗಾಯಿಸುತ್ತೇನೆ ಎಂದಾಗ ಮಡದಿ ಕಮಾಲಾಕ್ಷಿ ಅತ್ತು ಗೋಗರೆದಳು . . . 'ನೋಡಿ, ನನಗೆ ಕರಾವಳಿಯ ಸೆಖೆಯ ರಾಜ್ಯದಲ್ಲಿ ಇರಲಿಕ್ಕೆ ಎಳ್ಳಷ್ಟೂ ಮನಸ್ಸಿಲ್ಲ. ಅಲ್ಲಿ ಏನಿದೆ ಮಣ್ಣು . . .' ಎಂದರೆ 'ಅಹುದಹುದು, ಅಲ್ಲಿಯ ಮಣ್ಣೇ ಮಲ್ಲಿಗೆಯಂತೆ ಪರಿಮಳ' ನೋಡು ಕಮಲೀ, ನಮ್ಮ ಪಡುಗಲಿನಿಂದ ಬೀಸುವ ಆ ಗಾಳಿ ಕೊಡುವ ಆಹ್ಲಾದ, ಈ ಬೆಂಗಳೂರಿನ ಕಲುಷಿತ ವಾತಾವರಣಕ್ಕಿಂತ ಎಷ್ಟೋ ವಾಸಿ' ಎನ್ನುತಿದ್ದ. 'ಹೋಗಿ, ನೀವೊಬ್ಬರು, ನಿಮ್ಮ ಕವಿತ್ವವೋ, ಕಪಿತ್ವವೋ ಸಾಕು. ಬಣ್ಣದ ಮಾತುಗಳಿಂದ ನನ್ನನ್ನು ಮರುಳು ಮಾಡಬೇಡಿ' ಎಂದು ಅವಳು ಹೇಳುತ್ತಿದ್ದಳು.

ಹತ್ತಾರು ತಿಂಗಳ ವಾದ ವಿವಾದವಾದ ಮೇಲೆ ರಾಜಾರಾಮ ಗೆದ್ದ, ಮನಸ್ಸಿಲ್ಲದ ಮನಸ್ಸಿಂದ ಕಮಲಾಕ್ಷಿ ಪಡುಕೆರೆಯಲ್ಲಿ ಯಜಮಾನರು ಕಟ್ಟಿಸಿದ ಚಿಕ್ಕದಾದರೂ, ಚೊಕ್ಕದಾದ ಮನೆಗೆ ಹೋಗಿ ನೆಲೆಸಲು ಒಪ್ಪಿದಳು. ಆಕೆ ಹೀಗೆ ಒಪ್ಪಲು ಒಂದು ಘಟನೆ ನಡೆಯಿತು. ದೂರದ ದಿಲ್ಲಿಯಲ್ಲಿ ಸಿಂಡಿಕೇಟ್ ಬ್ಯಾಂಕಿನಲ್ಲಿ ಮ್ಯಾನೇಜರ್ ಆಗಿದ್ದ ಅವರ ಮಗಳು ವಾಸಂತಿಗೆ ಮಣಿಪಾಲ ಹೆಡ್ಆಫೀಸಿಗೆ

ವರ್ಗವಾಗಿದ್ದರೆ, ಅವಳ ಗಂಡ ವಿಶ್ವನಾಥ್‌ಗೆ ಕೆನರಾಬ್ಯಾಂಕಿನ ಕರೋಲ್‌ಬಾಗ್ ಶಾಖೆಯಿಂದ ಬ್ರಹ್ಮಾವರಕ್ಕೆ ವರ್ಗವಾಗಿತ್ತು. ಇಬ್ಬರಿಗೂ ಅನುಕೂಲವಾಗಲೆಂದು ಅವರು ಕಲ್ಯಾಣಪುರದಲ್ಲಿ ಬಿಡಾರ ಮಾಡಿದರು. ಅವರ ಒಬ್ಬಳೇ ಮಗಳು ಅನಿತಾಳನ್ನು ಬ್ರಹ್ಮಾವರದ ಲಿಟಲ್‌ರಾಕ್ ಶಾಲೆಗೆ ಸೇರಿಸಿದ್ದರು. 'ಅಮ್ಮಾ . . . ನೀನೂ ಊರಿಗೆ ಬಂದುಬಿಡು, ಹೇಗೂ ಅಣ್ಣ ಅರವಿಂದ ಚಿಕಾಗೋ ಬಿಟ್ಟು ಬೆಂಗಳೂರಿಗೆ ಬರುವುದಿಲ್ಲ. ಅಲ್ಲಿಯೇ ಮನೆ ಕಟ್ಟುತ್ತಾನಂತೆ' ಎಂದು ಅವಳೆಂದಾಗ ಕಮಲಾಕ್ಷಿಗೆ ಮಗಳು ಹೇಳುವ ಮಾತಿನಲ್ಲಿ ಅರ್ಥವಿದೆ ಅನ್ನಿಸಿತು. ಬೆಂಗಳೂರಿನ ತಮ್ಮ ಬಿಡಾರದ ಹೂವಿನ ಕುಂಡಗಳಲ್ಲಿ ಕೆಲವನ್ನು ಗೆಳತಿಯರಿಗೆ ದಾನ ಮಾಡುವಾಗ ಅವಳ ಕಣ್ಣಲ್ಲಿ ನೀರೇ ಬಂತು. 'ಅಬ್ಬಾ, ಎಷ್ಟು ವರ್ಷಗಳ ನನ್ನ ಶ್ರಮ ವ್ಯರ್ಥವಾಯಿತಲ್ಲ . . . ಈ ಮುದ್ದು ಗುಲಾಬಿ ಗಿಡದಲ್ಲಿ ಬಿಡುವ ಕೆಂಪುಬಣ್ಣದ ದೊಡ್ಡ ದೊಡ್ಡ ಹೂಗಳೆಂದರೆ ನನಗೆ ಪಂಚಪ್ರಾಣ . . . ರೀ . . . ನೀವೆಂತಹ ಕಟುಕರು. ಒಮ್ಮೆಯಾದರೂ ಈ ಗಿಡಗಳ ಕಡೆ ನೋಡಿದ್ದೀರಾ ? ಅಲ್ಲಿ ನೋಡಿ ಆ ಎಕ್ಸೋರಾ ಗಿಡಗಳಲ್ಲಿ ಎಷ್ಟು ಚೆಂದವಾದ ಹೂ ಬಂದಿದೆ' ಎಂದು ಅವಳೆಂದಾಗ ರಾಜಾರಾಮ 'ಮಾರಾಯ್ತೀ . . . ಪಡುಕೆರೆಯ ನಮ್ಮ ತೋಟ ಒಂದೆಕರೆಯಷ್ಟಿದೆ, ಅಲ್ಲಿ ಎಷ್ಟು ಬೇಕಾದರೂ ಹೂಗಿಡಗಳನ್ನು ನೀನು ಬೆಳೆಸು ಅಂದಾಗ, 'ನಿಮ್ಮೂರ ಮಣ್ಣಿನಲ್ಲಿ ಸಾರವೇ ಇಲ್ಲ. ಬರಿಯ ಹೊಯಿಗೆ, ತೆಂಗಿನಗಿಡ ಬಿಟ್ಟು ನಿಮ್ಮಲ್ಲಿ ಬೇರೇನು ಬೆಳೆಯುತ್ತದೆ' ಎಂದು ಕಮಲಾಕ್ಷಿ ಹೇಳುತ್ತಿದ್ದಳು. ಅಂತೂ ಭಾದ್ರಪದ ಮಾಸದ ಅನಂತನ ಚತುರ್ದಶಿಗೆ ಎರಡು ದಿನಗಳಿರುವಾಗ ಲಾರಿಯೊಂದು ವಸಂತನಗರದ ರಾಜಾರಾಮಭಟ್ಟರ ಮನೆಯ ಸಾಮಾನುಗಳನ್ನೆಲ್ಲಾ ಹೊತ್ತು ಪಡುಕೆರೆಗೆ ಹೋಗಲು ನಿಂತಾಗ ಅಕ್ಕಪಕ್ಕದ ಮನೆಯವರೆಲ್ಲಾ ರಾಜಾರಾಮನಿಗೆ ವಿದಾಯ ಹೇಳಲು ಮನೆಯ ಮುಂದೆ ನೆರೆದರು. ಲಾರಿ ಹೊರಟ ಎರಡು ಗಂಟೆಗಳಲ್ಲಿ ರಾತ್ರಿ 9ರ ದುರ್ಗಾಂಬಾ ಬಸ್ಸಿನಲ್ಲಿ ರಾಜಾರಾಮನೂ, ಕಮಲಾಕ್ಷಿ ಊರಿಗೆ ಹೊರಟು ನಿಂತರು. ಕಮಲಾಕ್ಷಿ ತನ್ನ ಗೆಳತಿ ಅನುಸೂಯಳ ಹೆಗಲ ಮೇಲೆ ತಲೆ ಇತ್ತು ಗೋಳೋ ಎಂದು ಅತ್ತಳು. ವಸಂತನಗರದ ಚಿನ್ಮಯ ಮಿಶನ್ನಿನ ಕಾರ್ಯದರ್ಶಿಯಾದ ಅನುಸೂಯಾಳಿಗೂ ಕಮಲಾಕ್ಷಿಗೂ ಈಗ ಕೆಲವು ವರ್ಷಗಳಿಂದ ತೀವ್ರವಾದ ಸ್ನೇಹ ಸಂಬಂಧ. ಅನುಸೂಯಳ ಮಗ ಚಿನ್ಮಯನೂ ಕಮಲಾಕ್ಷಿಯ ಮಗ ಅರವಿಂದನೂ ಮಲ್ಲೇಶ್ವರದ ಎಂ.ಇ.ಎಸ್. ಕಾಲೇಜಿನಲ್ಲಿ ಸಹಪಾಠಿಗಳಾಗಿದ್ದವರು. ಒಬ್ಬರಿಗೊಬ್ಬರು ಅಚ್ಚುಮೆಚ್ಚಿನ ಗೆಳೆಯರಾಗಿದ್ದರು. ಮಿಲ್ಲರ್‌ರಸ್ತೆಯ ಪಕ್ಕದ ಕ್ರೀಡಾಂಗಣದಲ್ಲಿಯೋ ಅಥವಾ ಮನೆಯ ಎದುರಿನ ರಸ್ತೆಯಲ್ಲೋ ದಿನವೂ ಅವರು ಕ್ರಿಕೆಟ್ ಆಡುತ್ತಿದ್ದರು. ಕ್ರಿಕೆಟ್ ಆಟವೆಂದರೆ ಇಬ್ಬರಿಗೂ ಪ್ರಾಣ. ಮನೆಯ ಎದುರಿನ ರಸ್ತೆಯಲ್ಲಿ ಕ್ರಿಕೆಟ್ ಆಡಿ ಅವರಿವರ ಮನೆಯ ಕಿಟಕಿಯ ಗಾಜುಗಳನ್ನು ಒಡೆದಾಗ ಜನರಿಂದ ಬೈಗುಳ ತಿಂದದ್ದೂ ಉಂಟು. ಆದರೆ ಅರವಿಂದ ಈಗ ಚಿಕಾಗೋದಲ್ಲಿ ಸಾಫ್ಟ್‌ವೇರ್ ಕಂಪನಿಯಲ್ಲಿ ಕೆಲಸಕ್ಕೆ ಸೇರಿ ಅಲ್ಲಿಯೇ ಮನೆಯೊಂದನ್ನು ಖರೀದಿಸಿದ್ದಾನೆ. ಚಿನ್ಮಯನೂ ಸನ್ನಿವೇಲಿನಲ್ಲಿ ಹ್ಯೂಲೆಟ್ ಪ್ಯಾಕರ್ಡ್ ಕಂಪನಿಯಲ್ಲಿ ಕೆಲಸಕ್ಕೆ ಸೇರಿದ್ದಾನೆ. ಅನುಸೂಯ-ಕಮಲಾಕ್ಷಿ ಇಬ್ಬರಿಗೂ ಬಾಳಿನಲ್ಲಿ ಆವರಿಸುವ ಶೂನ್ಯವನ್ನು ಕಳೆಯಲು ಅವರು ಬೆಳೆಸುತ್ತಿರುವ ಹೂಗಿಡಗಳೋ ಅವರು ಹೋಗುತ್ತಿರುವ ಚಿನ್ಮಯ ಮಿಶನ್ನಿನ ಮಹಿಳಾಶಾಖೆಯೋ ಅಥವಾ ಗುಟ್ಟಹಳ್ಳಿಯ ಭಜನೆಯ ವೃಂದವೋ ಸಾಧನವಾಗಿದ್ದುವು.

(ಮುಂದುವರಿಯುವುದು)

